(ಎಂಬಂತೆ) ಕೊಡಬೇಕಾದ ತೆರಿಗೆಗಳಲ್ಲಿ ಮೊದಲ ಮತ್ತು ಎರಡನೆಯ ವರ್ಷಗಳಲ್ಲಿ ಕೆಲವು ರಿಯಾಯಿತಿಗಳನ್ನು ನೀಡಿರುವುದನ್ನು ಶಾಸನದಲ್ಲಿ ಹೇಳಿದೆ. ಶಾಸನದಲ್ಲಿ ಕಟ್ಬಪ್ಪುಗಿರಿ (ಶ್ರವಣಬೆಳಗೊಳ)ಯನ್ನು, ಭದ್ರಬಾಹು ಚಂದ್ರಗುಪ್ತಚರಣಲಾಞ್ಛನಾಙ್ಕಿತವೆಂದು ವರ್ಣಿಸಿದೆ.

ಪಾಂಪು ೪೭ನೆಯ ಶಾಸನದ ಕಾಲ ಕ್ರಿ. ಶ. ೯೦೬–೦೭ನೆಯ ವರ್ಷ. ಸತ್ಯವಾಕ್ಯಪೆರ್ಮಾನಡಿ ಆಳುತ್ತಿದ್ದನೆಂದು ಹೇಳಿದೆ. ಈ ವೇಳೆಗೆ ಇಮ್ಮಡಿ ರಾಚಮಲ್ಲನು ಹಾಗೂ ಆತನ ಸೋದರನ ಮಗ ನೀತಿಮಾರ್ಗ ಎಱೆಗಂಗನೂ ಒಟ್ಟಿಗೆ ರಾಜ್ಯಭಾರ ಮಾಡುತ್ತಿದ್ದರು. ಸತ್ಯವಾಕ್ಯ ಎಂಬ ಬಿರುದಿನ ಆಧಾರದಮೇಲೆ ಶಾಸನೋಕ್ತ ಅರಸನು ಇಮ್ಮಡಿ ರಾಚಮಲ್ಲನಾಗಿರಬೇಕೆಂದೆನಿಸುತ್ತದೆ.

ಕ್ಯಾತನಹಳ್ಳಿ (ಪಾಂಪು ೧೬)ಯ ಶಾಸನದಲ್ಲಿ ಚಾಗಿಪೆರ್ಮ್ಮಾನಡಿ ಕಟ್ಟಿಸಿದ (?) ಕೆಲ್ಲಬಸದಿಗೆ ಸತ್ಯವಾಕ್ಯಪೆರ್ಮಾನಡಿ ಮತ್ತು ಎಱೆಯಪ್ಪರಸರು ಅಕ್ಕಿಯನ್ನೂ, ತುಪ್ಪವನ್ನೂ ದಾನಮಾಡಿದರೆಂದಿದೆ. ಶಾಸನದಲ್ಲಿ ಕಾಲನಿರ್ದೇಶವಿಲ್ಲದಿದ್ದರೂ ಲಿಪಿಯ ಆಧಾರದಮೇಲೆ ಇವರಿಬ್ಬರು ಅರಸರನ್ನು ಕ್ರಮವಾಗಿ ಸತ್ಯವಾಕ್ಯ ಇಮ್ಮಡಿ ರಾಚಮಲ್ಲ ಮತ್ತು (ನೀತಿಮಾರ್ಗ) ಎಱೆಗಂಗರೆಂದು ಗುರುತಿಸಬಹುದು. ಅರಸರನ್ನು 'ಶ್ರವಣಸಂಘ ಸ್ಯಾದ್ವಾದಾಧಾರಭೂತ'ರೆಂದು ವರ್ಣಿಸಲಾಗಿದೆ. ದಾನವನ್ನು ಸ್ವೀಕರಿಸಿದ ಕೊಮಾರದೇವಭಟಾರನು ಬಹುಶಃ ಈ ಶ್ರವಣಸಂಘಕ್ಕೆ ಸೇರಿದವನಾಗಿರಬಹುದು. ಈ ಶಾಸನದಲ್ಲಿಯೂ ಕಟ್ಬಪ್ಪುತೀರ್ತ್ಥದ ಉಲ್ಲೇಖವಿದ್ದು ಅದು ಭದ್ರಬಾಹು ಮತ್ತು ಚಂದ್ರಗುಪ್ತ ಮುನಿಪತಿಗಳಿಂದ ಪವಿತ್ರೀಕೃತವಾದುದೆನ್ನಲಾಗಿದೆ.

## ಚೋಳರು

ಚೋಳರ ನಾಲ್ಕು ಶಾಸನಗಳಲ್ಲಿ ಎರಡು ಒಂದನೆಯ ರಾಜರಾಜನಿಗೆ ಸೇರಿದುವು. ಇವೆರಡೂ ಕನ್ನಡ ಲಿಪಿ ಹಾಗೂ ಭಾಷೆಯಲ್ಲಿವೆ. ಮೊದಲನೆಯ ಶಾಸನ (ಪಾಂಪು ೫೧)ದ ಕಾಲ ಕ್ರಿ. ಶ. ೧೦೧೧. ಎರಡನೆಯ ಶಾಸನ (ಶ್ರೀಪ ೭೮) ಒಂದು ವರ್ಷದ ನಂತರದ್ದು (೧೦೧೨–೧೩). ಈ ಬಲಮುರಿಯ ಶಾಸನವನ್ನು ಕುರಿತು ಈಗಾಗಲೇ ಚರ್ಚಿಸಿದ್ದೇವೆ.[1] ರಾಜರಾಜ ಚೋಳನ ಆಳಿಕೆಯ ಕಾಲದಲ್ಲಿ ರಾಜರಾಜನ ಪಾದಪಂಕಜಭ್ರಮರನೆನಿಸಿದ ಪಞ್ಚವಮಹಾರಾಯನು ಬೆಂಗಿ ಹಾಗೂ ಗಂಗಮಂಡಲಗಳ ಮಹಾದಣ್ಡನಾಯಕಪದವಿಯನ್ನು ಪಡೆದಿದ್ದನೆಂದು ಹೇಳಿದೆ. ಅಲ್ಲದೆ ಈತನು ತನ್ನ ದಿಗ್ವಿಜಯಗಳಲ್ಲಿ ಬೆಳ್ವಲದೇಶದವರೆಗೂ ಹೋಗಿದ್ದನೆಂದು ಸೂಚಿಸಿರುವುದರಿಂದ ಈ ಪಞ್ಚವನ್‌ಮಹಾರಾಯನು ಯುವರಾಜನಾಗಿದ್ದ ಮೊದಲನೆಯ ರಾಜೇಂದ್ರನೆಂಬುವುದರಲ್ಲಿ ಯಾವ ಸಂದೇಹವೂ ಇಲ್ಲ. ಇದೇ ಸುಮಾರಿಗೆ ರಾಜೇಂದ್ರನು ಚಾಲುಕ್ಯವಿಕ್ರಮಾದಿತ್ಯ(V)ನ ವಿರುದ್ಧ ದಂಡೆತ್ತಿಹೋಗಿದ್ದನೆಂಬುದು ನಮಗೆ ಇತರ ಆಧಾರಗಳಿಂದಲೂ ತಿಳಿದಿದೆ. ಪ್ರಸ್ತುತ ಶಾಸನದಲ್ಲಿ ರಾಜೇಂದ್ರನನ್ನು ಚೋಳನ ಗನ್ಧವಾರಣ, ಮುಮ್ಮಡಿಚೋಳನ ಗನ್ಧವಾರಣನೆಂದೆಲ್ಲಾ ವರ್ಣಿಸಿದೆ. ಮುಮ್ಮಡಿ ಚೋಳ ಎಂಬುದು ರಾಜರಾಜನ ಬಿರುದುಗಳಲ್ಲಿ ಒಂದು ಎಂಬುದು ಗಮನಾರ್ಹ.

ಶ್ರೀಪ ೭೭ ತಮಿಳು, ಗ್ರಂಥಲಿಪಿ ಹಾಗೂ ತಮಿಳು ಭಾಷೆಗಳಲ್ಲಿನ ಕುಲೋತ್ತುಂಗನ ಶಾಸನ. ಅರಸನ ಆಳಿಕೆಯ ೩೩ನೆಯ ವರ್ಷದ ಈ ಶಾಸನದಲ್ಲಿ ಆತನ ಮಂಡಲಿಕನಾದ ಪೋಮನ್ ಇರಾಮನ್ ಎಂಬಾತನು ವಾನವನ್‌ಮಾದೇವಿ ಚತುರ್ವೇದಿಮಂಗಲವೆನಿಸಿದ ಸಿಱಿಯ ಕಲಸತ್ತಪಾಡಿ ಗ್ರಾಮದ ಕೆರೆಯನ್ನು ಜೀರ್ಣೋದ್ಧಾರಗೊಳಿಸಿದನೆಂದು ಹೇಳಿದೆ. ಈತನಿಗೆ ವಿರುದರಾಯಭಯಂಕರಮಾರಾಯನ್ ಎಂಬ ಇನ್ನೊಂದು ಹೆಸರು ಇದ್ದಿತೆಂದು ಶಾಸನದಿಂದ ತಿಳಿದಿದೆ. ವಿರುದರಾಜ(ಯ) ಭಯಂಕರ ಎಂಬುದು ಮೊದಲನೆಯ ಕುಲೋತ್ತುಂಗನ ಬಿರುದುಗಳಲ್ಲಿ ಒಂದು. ಅರಸನ ಬಿರುದುಗಳನ್ನು ಮಂಡಲಿಕರು ತಮ್ಮ ಹೆಸರಿನೊಡನೆ ಸೇರಿಸಿ ಬಳಸುತ್ತಿದ್ದುದನ್ನು ಚೋಳರ ಶಾಸನಗಳಲ್ಲಿ ಸಾಮಾನ್ಯವಾಗಿ ಕಾಣುತ್ತೇವೆ. ಶಾಸನೋಕ್ತ ಕುಲೋತ್ತುಂಗನು ಮೊದಲನೆಯ ಕುಲೋತ್ತುಂಗನಾಗಿರಬಹುದೆಂದು ಊಹಿಸಿ ಶಾಸನದ ಕಾಲವನ್ನು ಕ್ರಿ. ಶ. ೧೧೦೨–೦೩ ಎಂದು ನಿಶ್ಚಯಿಸಿದ್ದೇವೆ.

ಕನ್ನಂಬಾಡಿಯಲ್ಲಿರುವ ಪಾಂಪು ೪೪ ಇದೇ ಅರಸನ ಇನ್ನೊಂದು ಶಾಸನ. ಈ ಕನ್ನಡ ಶಾಸನ ಮಾದಿಯಣ್ಣ ಮತ್ತು ಲಕ್ಕಣರು ಕಟ್ಟಿಸಿದ ಎರಡು ದೇಗುಲಗಳಿಗೆ ಗಾವುಂಡುಗಳಿಬ್ಬರು ನೀಡಿದ ಭೂಮಿದಾನವನ್ನು ಕುರಿತದ್ದಾಗಿದೆ. ದೇವಾಲಯ ಕಟ್ಟಿಸಿದ ಈರ್ವ್ವರು ವಡುಗವೇಳಿಕಾಱನಾದ ಮುತಹಡೆಯರಾಯನ ಮಕ್ಕಳು. ವೇಳೆಕಾಱ ಎಂಬುದು ವೇಳೆವಾಳಿಗೆ ಸಮಾನವಾದ ಪದ. ಸ್ವಾಮಿಗಾಗಿ ತಮ್ಮ ಜೀವವನ್ನೇ ಮುಡುಪಾಗಿಡುವ ಯೋಧರು ಇವರು. ವಡುಗವೇಳಿಕಾಱ ಎಂದರೆ ರಾಜ್ಯದ ಉತ್ತರ ಭಾಗದಲ್ಲಿದ್ದ ವೇಳಿಕಾಱ ಎಂದು ಅರ್ಥೈಸಬಹುದು.

---

[1] ಎ ಕ., V (ಪರಿಷ್ಕೃತ ಆವೃತ್ತಿ 1976) ಪೀಠಿಕೆ, ಪು. liv.

## ಹೊಯ್ಸಳರು

ಸಂಪುಟದಲ್ಲಿ ೯೦ಕ್ಕೂ ಮಿಕ್ಕಿದ ಶಾಸನಗಳು ಹೊಯ್ಸಳ ವಂಶದ ಅರಸರವು.

ಕೃಪೇ ೫೦ ತೊಣಚಿಯಲ್ಲಿ ದೊರೆತ ಶಾಸನ. ಈ ಶಾಸನದ ಉಲ್ಲೇಖ ಪುರಾತತ್ತ್ವ ಇಲಾಖೆಯ ವಾರ್ಷಿಕ ವರದಿಯಲ್ಲಿ ಬಂದಿದೆ.[1] ಶಾಸನದ ಚಿತ್ರವೂ ಅದರಲ್ಲಿದೆ. ತ್ರಿಭುವನಮಲ್ಲ ಪೊಯ್ಸಳದೇವ ಶಾಸನೋಕ್ತ ಅರಸ. ಶಾಸನದ ಕಾಲ ಶಕವರ್ಷ ೯೫೪ರ ಸರ್ವಜಿತು ಸಂವತ್ಸರ. ಈ ವಿವರ ಸರಿಹೊಂದುವುದಿಲ್ಲ. ಶಕ ೯೫೪ಕ್ಕೆ ಸಮನಾದ ಸಂವತ್ಸರ ಪ್ರಜಾಪತಿ. ಉಕ್ತವಾಗಿರುವ ಸಂವತ್ಸರವು ಸರಿಯಾಗಿದೆ ಎಂದು ಭಾವಿಸಿದರೆ ಶಕವರ್ಷವು ೯೭೦ (ಕ್ರಿ. ಶ. ೧೦೪೮–೪೯) ಆಗುತ್ತದೆ. ಈ ವೇಳೆಗೆ ಹೊಯ್ಸಳರ ವಿನಯಾದಿತ್ಯ ಆಳತೊಡಗಿದ್ದ. ಆದ್ದರಿಂದ ಶಾಸನೋಕ್ತ ಅರಸ ವಿನಯಾದಿತ್ಯನೆಂದು ಗುರುತಿಸಲಾಗಿದೆ.

ಕೃಪೇ ೩೭ರಲ್ಲಿ ಮಹಾಮಣ್ಡಲೇಶ್ವರ, ದ್ವಾರಾವತೀಪುರವರಾಧೀಶ್ವರ, ಯಾದವಕುಳಾಂಬರದ್ಯುಮಣಿ ಮುಂತಾದ ಬಿರುದುಗಳನ್ನು ಧರಿಸಿದ ಹೊಯ್ಸಳದೇವನು ಗಂಗಮಂಣ್ಡಲವನ್ನಾಳುತ್ತಿದ್ದನೆಂದಿದೆ. ಶಾಸನದ ಕಾಲವಾದ ಕ್ರಿ. ಶ. ೧೦೯೫–೯೬ರ ವೇಳೆಗೆ ಇನ್ನೂ ವಿನಯಾದಿತ್ಯನು ಆಳುತ್ತಿದ್ದ ಕಾರಣ ಹೊಯ್ಸಳದೇವನು ವಿನಯಾದಿತ್ಯನೆನ್ನಲು ಅಡ್ಡಿಯಿಲ್ಲ.

ಪಾಂಪು ೨೪೧ ಸುಂಕಾತೊಂಡನೂರು ಗ್ರಾಮದಲ್ಲಿ ದೊರೆತ ಶಾಸನ. ಇದರಲ್ಲ ಮಹಾಮಂಡಳೇಶ್ವರ ಹೊಯಿಸಳ ದೇವನು ದೋರಸಮುದ್ರದಲ್ಲಿ ರಾಜ್ಯವಾಳುತ್ತಿದ್ದನೆಂದಿದೆ. ವೀರಗಲ್ಲಿನ ಮೇಲಿರುವ ಈ ಶಾಸನ ಸವೆದಿದೆ. ಮಹಾಪ್ರಧಾನನ ಉಲ್ಲೇಖವಿದ್ದರೂ ಆತನ ಹೆಸರು ಇತ್ಯಾದಿ ವಿವರಗಳು ದೊರೆತಿಲ್ಲ. ಈ ಶಾಸನ ವಿಷ್ಣುವರ್ಧನದೇವನದೆಂದು ನರಸಿಂಹಾಚಾರ್ಯರು ತಿಳಿಸಿದ್ದಾರೆ.[2] ಆದರೆ ಇದಕ್ಕೆ ಆಧಾರಗಳೇನೋ ತಿಳಿಯದು. ವಿನಯಾದಿತ್ಯನ ಶಾಸನಗಳಲ್ಲಿ ದೋರಸಮುದ್ರದ ಉಲ್ಲೇಖವಿಲ್ಲ ದಿರುವುದರಿಂದ ಈ ಹೊಯ್ಸಳದೇವನು ವಿಷ್ಣುವರ್ಧನನೇ ಆಗಿರಬಹುದೆಂಬುದೊಂದು ಕಾರಣವಾಗಿರಬಹುದು. ಆದರೆ ೧೦೯೫–೯೬ರ ವೇಳೆಗೆ ವಿನಯಾದಿತ್ಯನೇ ದ್ವಾರಾವತೀಪುರವರಾಧೀಶ್ವರ ಮುಂತಾದ ಬಿರುದುಗಳನ್ನು ಧರಿಸಿದುದನ್ನು ಮೇಲೆ ಕಂಡಿದ್ದೇವೆ. ಅಲ್ಲದೆ ತೊಣಚಿ ಶಾಸನದಲ್ಲಿ ಈತನನ್ನು ಮಹಾಮಂಡಲೇಶ್ವರ ತ್ರಿಭುವನಮಲ್ಲ ಪೊಯ್ಸಳದೇವನೆಂದಷ್ಟೇ ಕರೆಯಲಾಗಿದೆ. ಇದು ವಿನಯಾದಿತ್ಯನ ಶಾಸನವೆಂದು ಸೂಚಿಸಲಾಗಿದೆ. ಆಳಿಕೆಯ ಆರಂಭದಲ್ಲಿನ ಈ ಶಾಸನದಲ್ಲಿ ಆತನನ್ನು ಕೇವಲ ಮಹಾ ಮಂಡಲೇಶ್ವರ ಪೊಯ್ಸಳದೇವನೆಂದು ಕರೆದಿರುವುದನ್ನು ಗಮನಿಸಿ ಸುಂಕಾತೊಂಡನೂರು ಗ್ರಾಮದ ಶಾಸನವನ್ನು ಸಹ ವಿನಯಾದಿತ್ಯನಿಗೇ ಅನ್ವಯಿಸಬಹುದೇನೋ. ಆದರೆ ಆ ವೇಳೆಗಾಗಲೇ ದೋರಸಮುದ್ರ ರಾಜಧಾನಿಯಾಗಿದ್ದಿತೇ ಎಂಬ ಪ್ರಶ್ನೆಗೆ ಸಮಂಜಸವಾದ ಉತ್ತರ ನೀಡಲಾಗದು.

ವಿಷ್ಣುವರ್ಧನನ ಹದಿನೇಳು ಶಾಸನಗಳಲ್ಲಿ ಕೃಪೇ ೧೧೪ನೆಯ ಶಾಸನ ಈ ಸಂಪುಟದಲ್ಲಿ ಆತನ ಮೊದಲನೆಯ ಶಾಸನ. ಕ್ರಿ. ಶ. ೧೧೧೪–೧೫ನೆಯ ವರ್ಷದ ಈ ಶಾಸನದಲ್ಲಿ ಅರಸನನ್ನು ಮಹಾಮಂಡಲೇಶ್ವರ ಬಿಟ್ಟಿಹೊಯ್ಸಳದೇವನೆಂದು ಕರೆದಿದೆ. ೧೧೧೮ನೆಯ ವರ್ಷದ ಶಾಸನದಲ್ಲಿ (ಪಾಂಪು ೪೧) ಲಿಂಗಪಯ್ಯನೆಂಬಾತನು ಈತನ ಮಹಾಪ್ರಧಾನ ಮತ್ತು ದಂಡನಾಯಕ ನಾಗಿದ್ದನೆಂದಿದೆ. ಅಂದು ವಿಷ್ಣುವರ್ಧನನು ತಳಕಾಡಿನ ನೆಲೆವೀಡಿನಲ್ಲಿದ್ದ. ಕೃಪೇ ೭೨ನೆಯ ಶಾಸನದಿಂದ ಮಹಾಸಾಮಂತ ಮಾಚಯನಾಯಕನು ಕ್ರಿ. ಶ. ೧೧೪೦ರಲ್ಲಿ ಮಾಳಿಗೆಯೂರನ್ನಾಳುತ್ತಿದ್ದನೆಂದು ತಿಳಿದಿದೆ. ಆದರೆ ಕ್ರಿ. ಶ. ೧೧೧೭ರಲ್ಲಿ ಬಹುಶಃ ಅದೇ ಮಾಳಿಗೆಯೂರನ್ನು ಬಲ್ಲೆಯನಾಯಕನು ಆಳುತ್ತಿದ್ದ. ಈತನು ಪಿರಿಯರಸಿ ಪಟ್ಟಮಹಾದೇವಿ ಶಾಂತಲದೇವಿಯರ ಮಯ್ದುನ ಎಂದು ಶಾಸನದಲ್ಲಿ ಹೇಳಿದೆ. ಮಯ್ದುನ ಎಂಬ ಪದಕ್ಕೆ ಗಂಡನ ತಮ್ಮ ಎಂಬ ಸಾಮಾನ್ಯವಾಗಿ ಬಳಕೆಯಲ್ಲಿರುವ ಅರ್ಥವನ್ನು ಅನ್ವಯಿಸಿದರೆ ಬಲ್ಲೆಯನಾಯಕ ವಿಷ್ಣುವರ್ಧನನ ತಮ್ಮನೆಂದಾಗುತ್ತದೆ. ವಾಸ್ತವಿಕವಾಗಿ ವಿಷ್ಣುವರ್ಧನನಿಗೆ ಆ ಹೆಸರಿನ ತಮ್ಮನೇ ಇರಲಿಲ್ಲ. ತಂಗಿಯ ಗಂಡ ಎಂಬ ಇನ್ನೊಂದು ಅರ್ಥವೂ ಆ ಪದಕ್ಕೆ ಇದೆ. ಅದರಂತೆ ಅರ್ಥೈಸಿ ಬಲ್ಲೆಯನಾಯಕನು ಶಾಂತಲೆಯ ತಂಗಿಯ ಗಂಡನೆನ್ನಬೇಕಾಗುತ್ತದೆ. ಆದರೆ ಶಾಂತಲೆಗೆ ಸೋದರಿಯರಿದ್ದರೆಂಬುದು ತಿಳಿದಿಲ್ಲ.

ಕಿಕ್ಕೇರಿ–೧೨ ಎಂಬ ಸಣ್ಣ ವಿಭಾಗವನ್ನು ಚಿಣ್ಣ ಎಂಬ ಅಧಿಕಾರಿ ಆಳುತ್ತಿದ್ದ. ಇದುವರೆಗೂ ಅಪ್ರಕಟಿತವಾಗಿದ್ದ ಹಿರಿಕಳಲೆಯ ಈ ಶಾಸನ (ಕೃಪೇ ೭೩)ದಲ್ಲಿ ಆತನ ಗುಣಗಳ ವರ್ಣನೆಯಿದೆ. ಶಾಸನದ ಕಲ್ಲಿನ ಕೆಳಭಾಗ ಒಡೆದಿದೆ. ಕಾಲನಿರ್ದೇಶವಿಲ್ಲ. ಪುರಾತತ್ವ ಇಲಾಖೆಯ ವಾರ್ಷಿಕ ವರದಿಯಲ್ಲಿ[3] ಕಾಣಿಸಲಾಗಿರುವ ಹಿರಿಕಳಲೆಯ ಶಾಸನ ಇದೇ. ಅಲ್ಲಿ ಚಿಣ್ಣನು ಮಂಕಿಕೆ–೧೨ನ್ನು ಆಳುತ್ತಿದ್ದನೆಂದು ಹೇಳಿದೆ. ಆದರೆ ಅದು ತಪ್ಪು. ಕಿಕ್ಕೇರಿ–೧೨ ಎಂಬುದು ಸರಿಯಾದ ಶಾಸನಪಾಠ.

---

[1] ಎಂ ಎ ಆರ್., 1915, ಪು. 50.

[2] ಎಂ ಎ ಆರ್., 1912, ಪು. 41.

[3] ಎಂ ಎ ಆರ್., 1915, ಪು. 50.

ಪಿ:೩ಕೆ
ಈ ಶಾಸನದ ಕಲ್ಲಿನ ದಕ್ಷಿಣಮುಖದಲ್ಲಿರುವ ಮತ್ತೊಂದು ಶಾಸನ (ಕೃಪೇ ೭೪)ದ ಕಾಲ ೧೧೧೩. ಇದು ವಿಷ್ಣುವರ್ಧನನ ಆಳಿಕೆಯ ಕಾಲಕ್ಕೆ ಸೇರಿದುದಾದ ಕಾರಣ ಮೇಲಿನ ಶಾಸನ ಸಹ ಸುಮಾರು ಅದೇ ಕಾಲಕ್ಕೆ ಸೇರಿದ್ದಿತೆಂದು ಊಹಿಸಬಹುದು. ಹಾಗಿದ್ದಲ್ಲಿ ಇದು ಪ್ರಸ್ತುತ ಸಂಪುಟದಲ್ಲಿನ ವಿಷ್ಣುವರ್ಧನನ ಶಾಸನಗಳಲ್ಲಿ ಮೊದಲನೆಯದಾಗುತ್ತದೆ.

ಕೃಪೇ ೧೧೭ರಲ್ಲಿ ಮಹಾಪ್ರಧಾನ ದಂಡನಾಯಕ ಪುಣಿಸಮಯ್ಯನು ಬಸದಿಯನ್ನು ಮಾಡಿಸಿ ಅದಕ್ಕೆ ಮಾಣಿಕ ದೊಡಲೂರು ಮತ್ತು ಮಾವಿನಕೆರೆ ಗ್ರಾಮಗಳನ್ನು ದತ್ತಿಯಾಗಿ ನೀಡಿದನೆಂದಿದೆ. ಶಾಸನದ ಕಾಲ ಹಾಗೂ ಇತರ ವಿವರಗಳು ಲಭ್ಯವಾಗಿಲ್ಲ.

ಪಾಂಪು ೭೩ನೆಯ ತೊಣ್ಣೂರಿನ ಲಕ್ಷ್ಮೀನಾರಾಯಣಸ್ವಾಮಿ ದೇವಾಲಯದಲ್ಲಿ ಅಮ್ಮನವರ ಗುಡಿಯ ನವರಂಗ ಮಂಟಪದ ಕಂಬದಲ್ಲಿರುವ ಶಾಸನದಲ್ಲಿ ವಿಷ್ಣುವರ್ಧನ ಪ್ರತಾಪ ಹೊಯ್ಸಳದೇವರನ್ನು ಪ್ರಸ್ತಾಪಿಸಿ, ಮಹಾಪ್ರಧಾನ, ತಂತ್ರಾಧಿಷ್ಟಾಯಕ, ಮಹಾಪಸಾಯಿತ, ಹೆಗ್ಗಡೆ ಸುರಿಗೆಯ ನಾಗಯ್ಯನು ಓಲಗ ಶಾಲೆಯನ್ನು (ನವರಂಗ ಮಂಟಪವನ್ನು) ಮಾಡಿಸಿದನೆಂದು ಹೇಳಿದೆ. ಕಾಲನಿರ್ದೇಶವಿಲ್ಲ. ಅದೇ ಗ್ರಾಮದ ಇಮ್ಮಡಿ ಬಲ್ಲಾಳನ ಕ್ರಿ.ಶ. ೧೧೭೫ನೆಯ ವರ್ಷದ ಶಾಸನದಲ್ಲಿ (ಪಾಂಪು ೭೯) ಬಹುಶಃ ಇದೇ ಅಧಿಕಾರಿಯ ಬೆಸದಿಂದ ನಾಯಕ ಹೆಗ್ಗಡೆ ಮಾರಣ್ಣನು ಪನ್ನಾಯವನ್ನು ಮಾನ್ಯ ಮಾಡಿದುದರ ಉಲ್ಲೇಖವಿದೆ. ಮತ್ತೊಂದು ಕಾಲನಿರ್ದೇಶವಿಲ್ಲದ ಶಾಸನದಲ್ಲಿ ಶ್ರೀಮನ್‌ಮಹಾಪ್ರಧಾನಂ ಶ್ರೀಕರಣದ ಹೆಗ್ಗಡೆ ನಾಗಣ್ಣಗಳು ಮಂಟಪವನ್ನು ಮಾಡಿಸಿದುದಾಗಿ ಹೇಳಿದೆ. ಈ ನಾಗಣ್ಣನು ಸುರಿಗೆಯ ನಾಗಯ್ಯನೇ ಆಗಿರಬಹುದು. ಮೊದಲನೆಯ ಶಾಸನ ವಿಷ್ಣುವರ್ಧನನ ಕಾಲದ್ದು. ಎರಡನೆಯದು ಇಮ್ಮಡಿ ಬಲ್ಲಾಳನ ಕಾಲದ್ದು. ಇವೆರಡರಲ್ಲಿಯೂ ಉಕ್ತವಾಗಿರುವ ನಾಗಯ್ಯ ಒಬ್ಬನೇ ಆಗಿದ್ದಲ್ಲಿ ಬಹುಶಃ ವಿಷ್ಣುವರ್ಧನನ ಆಳಿಕೆಯ ಅಂತ್ಯಭಾಗದಲ್ಲಿ ಅಧಿಕಾರಕ್ಕೆ ಬಂದ ಈತ ಇಮ್ಮಡಿ ಬಲ್ಲಾಳನ ಕಾಲದಲ್ಲೂ ಅಧಿಕಾರದಲ್ಲಿ ಮುಂದುವರಿದಿರಬೇಕೆಂದು ಊಹಿಸಬಹುದು.

ಹೊಸಕೋಟೆಯಲ್ಲಿನ ಸವೆದುಹೋದ ಶಾಸನ (ಪಾಂಪು ೨೯)ದಲ್ಲಿ ವಿಷ್ಣುವರ್ಧನ ಹೊಯ್ಸಳದೇವರು ತಮ್ಮವ್ವೆ ತುಳುವಲದೇವಿಯರು ತಮ್ಮಾತ್ಮಾಗ್ರಜನಪ್ಪ ನೃಪಭೂಪನುವಿದ್ದರ್ ಸಿವಯೋಗಿ ಧರ್ಮಪುರಿಭಟ್ಟರಿಗೆ ಮಾಡಿದ ದಾನವೊಂದರ ಉಲ್ಲೇಖವಿದೆ. ಶಂಭುನಹಳ್ಳಿಯ ಶಾಸನ (ಪಾಂಪು ೧೧) ಸಹ ವಿಷ್ಣುವರ್ಧನ ಹೊಯ್ಸಳದೇವನಿಗೆ ಸೇರಿದುದೇ. ಆದರೆ ಅದರಲ್ಲಿ ತಮ್ಮವ್ವೆ ಮಾದಲಮಹಾದೇವಿಯರು ಮಾಡಿಸಿದ ತುಪ್ಪಲೇಸ್ವರದೇವರಿಗೆ ಗ್ರಾಮವನ್ನು ದಾನಮಾಡಿದ ಪ್ರಸ್ತಾಪವಿದ್ದರೂ ತಮ್ಮವ್ವೆ ಎಂಬ ಮಾತು ಯಾರಿಗೆ ಅನ್ವಯಿಸುತ್ತದೆ ಎಂಬುದು ಸ್ಪಷ್ಟವಿಲ್ಲ. ಮಧ್ಯದ ಸ್ವಲ್ಪ ಭಾಗ ಸವೆದಿರುವುದಲ್ಲದೆ ಯಾದವಪುರದ ಉಲ್ಲೇಖವೂ ಅಲ್ಲಿ ಬಂದಿದೆ. ಆದರೆ ಹೊಸಕೋಟೆಯ ಶಾಸನದಲ್ಲಿ ಮಾತ್ರ ತುಳುವಲದೇವಿಯನ್ನು ವಿಷ್ಣುವರ್ಧನನ ಅವ್ವೆ ಎಂದು ಸ್ಪಷ್ಟವಾಗಿ ಹೇಳಿದೆ. ಇದುವರೆಗೆ ತಿಳಿದಂತೆ ವಿಷ್ಣುವರ್ಧನನೂ ಆತನ ಸೋದರರೂ ಏಚಲದೇವಿಯ ಮಕ್ಕಳು. ಹಾಗಿದ್ದಲ್ಲಿ ತುಳುವಲದೇವಿಗೂ ವಿಷ್ಣುವರ್ಧನನಿಗೂ ಇದ್ದ ಸಂಬಂಧವೆಂತಹುದು ? ಆಕೆ ಎರೆಯಂಗನ ಇನ್ನೊಬ್ಬ ಪತ್ನಿಯಾಗಿರಬಹುದೇ ?

ಕೃಪೇ ೫೭ನೆಯ ಶಾಸನದಲ್ಲಿ ನಂಗಲಿಯ ಗೆಲದ ಶ್ರೀ ವಿಷ್ಣುವರ್ಧನದೇವರು ತೊಳಂಚೆಯ ಕಱುದೇವರಿಗೆ ಭೂದಾನ ಮಾಡಿದನೆಂದಿದೆ. ದುರದೃಷ್ಟವಶಾತ್ ಶಾಸನದಲ್ಲಿ ತೇದಿ ಇತ್ಯಾದಿ ವಿವರಗಳು ಲಭ್ಯವಾಗಿಲ್ಲ. ಅರಸ ನಂಗಲಿಯನ್ನು ಗೆದ್ದುಕೊಂಡ ಸಂದರ್ಭದಲ್ಲಿ ಈ ದಾನ ಮಾಡಿದನೆಂದು ಹೇಳಬಹುದು. ಆದರೆ ಅದು ಯಾವ ವರ್ಷ ಎಂಬುದು ತಿಳಿದಿಲ್ಲ.

ನಾಗರಘಟ್ಟಶಾಸನ (ಕೃಪೇ ೬೦)ದಲ್ಲಿ ವಿಷ್ಣುವರ್ಧನನು ಬಂಕಾಪುರದ ನೆಲೆವೀಡಿನಲ್ಲಿದ್ದನೆಂದಿದೆ. ಇದರಲ್ಲಿಯೂ ತೇದಿ ಇಲ್ಲ. ಆದರೆ ಸುಮಾರು ಕ್ರಿ.ಶ. ೧೧೩೭ರಲ್ಲಿ ವಿಷ್ಣುವರ್ಧನನು ಬಂಕಾಪುರವನ್ನು ಗೆದ್ದುಕೊಂಡನೆಂದು ತಿಳಿದಿದೆ. ಆ ಬಳಿಕವೂ ಆಗಿಂದಾಗ್ಯೆ ಆತ ಬಂಕಾಪುರದಲ್ಲಿ ತಂಗುತ್ತಿದ್ದ. ಶಾಸನದಲ್ಲಿ ಆತನು ವಿರಾಟಪುರ(ಹಾನಗಲ್ಲು)ವನ್ನೂ ಕೊಂಡನೆಂದಿದೆ. ಈ ವಿಜಯ ಸುಮಾರು ೧೧೪೧ರಲ್ಲಿ. ಎಂದ ಬಳಿಕ ಶಾಸನ ೧೧೪೧ರ ನಂತರ ಹುಟ್ಟಿದುದಾಗಿರಬೇಕು.

ಕೃಪೇ ೨೧ನೆಯ ಶಾಸನದಲ್ಲಿ ವಿಷ್ಣುವರ್ಧನನ ಪಿರಿಯರಸಿಯಾದ ಚಂದಲದೇವಿಯು ತನ್ನ ತಮ್ಮನಾದ ದುದ್ದಮಲ್ಲದೇವನೊಡಗೂಡಿ ವೀರಕೊಂಗಾಳ್ವಜಿನಾಲಯಕ್ಕೆ ಮಾಡಿದ ದಾನದ ಪ್ರಸ್ತಾಪವಿದೆ. ದಾನಮಾಡಿದ ಕಾವನಹಳ್ಳಿ ಮಂದಗೆಱೆವೃತ್ತಿಯೊಳಗಣ ಒಂದು ಗ್ರಾಮ. ಮಂದಗೆಱೆಯನ್ನು ಅರಸಿಯು ತನ್ನ ಬಪ್ಪ ಪ್ರಿಥ್ವಿಯಕೊಂಗಾಳ್ವದೇವರಿಂದ ಬಳುವಳಿಯಾಗಿ ಪಡೆದುದಾಗಿ ಹೇಳಿದೆ. ಶಾಸನವನ್ನು ಪಡೆದ ಪ್ರಭಾಚಂದ್ರಸಿದ್ಧಾನ್ತದೇವರು ಮೇಘಚಂದ್ರತ್ರೈವಿದ್ಯದೇವರ ಶಿಷ್ಯನಾಗಿದ್ದು ಮೂಲಸಂಘ, ದೇಸಿಗಗಣ, ಪುಸ್ತಕಗಚ್ಛಕ್ಕೆ ಸೇರಿದ್ದರೆಂದು ಶಾಸನದಲ್ಲಿ ಹೇಳಿದೆ. ಈ ಶಾಸನ ಮೂಲತಃ ಪುರಾತತ್ವ ಇಲಾಖೆಯ ೧೯೨೭ನೆಯ ವರ್ಷದ ವಾರ್ಷಿಕ ವರದಿಯಲ್ಲಿ ಪ್ರಕಟವಾಗಿದ್ದು ಅದರಲ್ಲಿ ಅರಸಿಯ ಹೆಸರನ್ನು ಚಂತಲದೇವಿ ಎಂದು ಓದಲಾಗಿದೆ. ಚಂತಲದೇವಿ

ಎಂಬುದು ಶಾಂತಲದೇವಿ ಎಂಬ ಹೆಸರಿಗೆ ಬದಲಾಗಿ (ತಪ್ಪಾಗಿ) ಬರೆಯಲಾದ ಹೆಸರೆಂದೂ ಸೂಚಿಸಲಾಗಿದೆ. ಆದರೆ ಕನ್ನಡದ ಶಾಸನಪಾಠದಲ್ಲಿ ಚಂದಲದೇವಿ ಎಂದೇ ಇದೆ.

ವಾಸ್ತವಿಕವಾಗಿ ಈ ಚಂದಲದೇವಿ ಶಾಸನದಲ್ಲಿಯೇ ಹೇಳಿರುವಂತೆ ಪೃಥ್ವೀಕೊಂಗಾಳ್ವನ ಮಗಳು. ಈತ ಇಮ್ಮಡಿ ರಾಜಾಧಿರಾಜನ ಮಗನಾದ ರಾಜೇಂದ್ರಪೃಥ್ವೀಕೊಂಗಾಳ್ವನೆಂದು ಊಹಿಸಬಹುದು. ಈತನ ಮಗ ದುದ್ದಮಲ್ಲ. ವೀರ (ಚೋಳ) ಕೊಂಗಾಳ್ವನೆಂಬ ಹೆಸರಿನಿಂದಲೂ ಈತ ಶಾಸನಗಳಲ್ಲಿ ಕಾಣಿಸಿಕೊಂಡಿದ್ದಾನೆ.[1] ಈತನ ಸೋದರಿ ಚಂದಲದೇವಿ ವಿಷ್ಣುವರ್ಧನನ ಪತ್ನಿ. ಈ ಅರಸಿಯ ಗುರುವಾದ ಪ್ರಭಾಚಂದ್ರಸಿದ್ಧಾಂತದೇವನು ಶಾಂತಲದೇವಿಗೂ ಗುರುವಾಗಿದ್ದನೆಂಬುದು ಗಮನಾರ್ಹ. ಬಹುಶಃ ಈ ಕಾರಣದಿಂದಲೇ ಚಂದಲದೇವಿಯನ್ನು ಶಾಂತಲದೇವಿ ಎಂದು ಡಾ. ಶಾಮಶಾಸ್ತ್ರಿಗಳು ಗುರುತಿಸಿದಂತೆ ತೋರುತ್ತದೆ.

ಶ್ರೀಪ ೭೦ ಬೆಳಗೊಳದ ಜನಾರ್ದನ ದೇವಾಲಯದ ತಳಪಾದಿಯ ಕಲ್ಲಿನ ಮೇಲೆ ಕೆತ್ತಲಾದ ಶಾಸನ. ಡಾ. ಎಂ.ಎಚ್. ಕೃಷ್ಣರವರು ಇದನ್ನು ೧೯೪೪ನೆಯ ವಾರ್ಷಿಕ ವರದಿಯಲ್ಲಿ ಪ್ರಕಟಿಸಿರುವುದಲ್ಲದೆ ಶಾಸನದ ಮಹತ್ವವನ್ನು ಕುರಿತು ದೀರ್ಘವಾಗಿ ಚರ್ಚಿಸಿದ್ದಾರೆ. ಶಾಸನದಲ್ಲಿ ಕೊಟ್ಟ ಸಂವತ್ಸರ ಇತ್ಯಾದಿ ವಿವರಗಳು ಕ್ರಿ.ಶ. ೧೦೯೮ನೆಯ ನವೆಂಬರ್ ೨೧ಕ್ಕೆ ಸರಿಹೊಂದುತ್ತವೆ ಎಂದಿದ್ದಾರೆ. ಶಾಸನದಲ್ಲಿ ಶಕವರ್ಷದ ಉಲ್ಲೇಖವಿಲ್ಲ. ಶಾಸನದ ಮೂಲಪ್ರತಿಗಳನ್ನು ಪಡೆಯಲಾಗಲಿಲ್ಲ. ಆದರೆ ವಾರ್ಷಿಕ ವರದಿಯಲ್ಲಿ ಕೊಟ್ಟಿರುವ ಶಾಸನದ ಪಡಿಯಚ್ಚಿನ ನೆರವಿನಿಂದ ಶಾಸನ ಪಾಠವನ್ನು ಓದಿದಾಗ ಈಗ ನಾವು ನೀಡಿರುವ ಪಾಠಕ್ಕೂ, ಕೃಷ್ಣರವರು ಪ್ರಕಟಿಸಿದ ಪಾಠಕ್ಕೂ ವ್ಯತ್ಯಾಸಗಳಿರುವುದು ಕಂಡುಬಂದಿದೆ. ಉದುಬವಸರ್ವಜ್ಞದೇವಪ್ಪೆರುಮಾಳ್ ಎಂಬಾತ ದಕ್ಷಿಣವಾರಣಾಸಿ ಎನಿಸಿದ ಸರ್ವನಮಸ್ಯದಗ್ರಹಾರದಲ್ಲಿ ಪ್ರತಿಷ್ಠಿಸಿದ ರಾಮಲಕ್ಷ್ಮಣದೇವರುಗಳಿಗೆ ಲವಿಯಣ್ಣ, ತಿರುನಾರಾಯಣಪ್ಪೆರುಮಾಳ್, ಚಿರುಲವಿಯಣ್ಣ ಮತ್ತು ಪೊಮ್ಮಿಯಣ್ಣಗಳೊಡಗೂಡಿ ಕೊಜ್ಙಕೊಂಡ ಶ್ರೀ ವಿಷ್ಣುವರ್ಧನ ಪೋಶಳದೇವಚತುರ್ವೇದಿಮಙ್ಗಲದ ಮಹಾಜನಗಳು ಭೂದಾನ ಮಾಡಿದುದಾಗಿ ಶಾಸನ ಹೇಳುತ್ತದೆ ಎಂದಿದ್ದಾರೆ ಡಾ. ಕೃಷ್ಣ. ನಮ್ಮ ಶಾಸನಪಾಠದಂತೆ ಕೊಜ್ಙಕೊಂಡ ವಿಷ್ಣುವರ್ಧನಪೋಸಳದೇವಚತುರ್ವೇದಿಮಂಗಲವೆನಿಸಿದ ವಳೈಕುಳಂ ಎಂಬ ಗ್ರಾಮದ ವಳೈಅಣ್ಣನ್, ತಿರುನಾರಾಯಣಪ್ಪೆರುಮಾಳ್, ಶಿರುವಳೈಅಣ್ಣನ್ ಮತ್ತು ಪೊಮ್ಮಿಯಣ್ಣನ್ ಇವರನ್ನೊಳಗೊಂಡ ಅಶೇಷಮಹಾಜನಗಳು ಇರೈಅಪ್ಪನ್ ಎಂಬಾತನು ಪ್ರತಿಷ್ಠಿಸಿದ ಸರ್ವನಮಸ್ಯದಗ್ರಹಾರ ದಕ್ಷಿಣವಾರಣಾಸಿ ಉದ್ಭವ ಸರ್ವಜ್ಞದೇವವರಪೆರುಮಾಳ್ ಎಂಬ ರಾಮಲಕ್ಷ್ಮಣದೇವರುಗಳಿಗೆ ಅರಿಯಮರೆಡ್ಡಿ ಕಟಿನಿ ಎಂದು ಕರೆಯಲಾದ ಭೂಮಿಯನ್ನು ಸರ್ವಮಾನ್ಯವಾಗಿ ದಾನಮಾಡಿದರೆಂದು ಶಾಸನದಲ್ಲಿ ಹೇಳಿದೆ.

ಶಾಸನದಲ್ಲಿ ನೀಡಿರುವ ತೇದಿಯ ವಿವರಗಳನ್ನು ಕ್ರಿ.ಶ. ೧೦೯೮, ನವೆಂಬರ್ ೨೧ಕ್ಕೆ ಸರಿಹೊಂದಿಸಿದುದರ ಪರಿಣಾಮವಾಗಿ ಶಾಸನ ರಾಮಾನುಜಾಚಾರ್ಯ ಹಾಗೂ ಹೊಯ್ಸಳ ವಿಷ್ಣುವರ್ಧನನಿಗೆ ಸಂಬಂಧಿಸಿದ ಸಾಂಪ್ರದಾಯಿಕ ಕತೆಗಳನ್ನು ಕುರಿತು ಹೊಸಬೆಳಕನ್ನು ಚೆಲ್ಲುತ್ತದೆ ಎಂದು ಡಾ. ಕೃಷ್ಣ ಭಾವಿಸಿದ್ದಾರೆ. ಕ್ರಿ.ಶ. ೧೧೧೬ರ ಸುಮಾರಿಗೆ ವಿಷ್ಣುವರ್ಧನನು ರಾಮಾನುಜಾಚಾರ್ಯರನ್ನು ಸಂದರ್ಶಿಸಿ ಶ್ರೀವೈಷ್ಣವಧರ್ಮವನ್ನವಲಂಬಿಸಿದನೆಂಬುದು ಸಾಂಪ್ರದಾಯಿಕವಾದ ನಂಬುಗೆ. ಅಲ್ಲದೆ ಅದರ ಪರಿಣಾಮವಾಗಿ ಆನಂತರ ವಿಷ್ಣುವರ್ಧನನು ಚಟುವಟಿಕೆಗಳನ್ನು ಹೆಚ್ಚಿಸಿಕೊಂಡು ತಳಕಾಡು, ಕೊಂಗು ಇತ್ಯಾದಿಗಳನ್ನು ಗೆದ್ದುಕೊಂಡನೆಂದೂ ಊಹಿಸಲಾಗಿದೆ. ಆದರೆ ೧೧೦೨ನೆಯ ವರ್ಷದ ಹಳೇಬೀಡಿನ ಸಮೀಪದ ಬಸ್ತಿಹಳ್ಳಿಶಾಸನ ಮತ್ತು ಪ್ರಸ್ತುತ ಬೆಳಗೊಳ ಶಾಸನಗಳು ಈ ಊಹೆಗಳನ್ನು ಅಲ್ಲಗಳೆಯುತ್ತವೆ. ಪ್ರಸ್ತುತ ಶಾಸನದಿಂದ ೧೦೯೮ರ ವೇಳೆಗೇ ವಿಷ್ಣುವರ್ಧನನು ಕೊಂಗುದೇಶವನ್ನು ಗೆದ್ದುಕೊಂಡನೆಂದೂ, ಆ ವೇಳೆಗಾಗಲೇ ಆತ ವಿಷ್ಣುವರ್ಧನನೆಂಬ ಹೆಸರನ್ನು ಪಡೆದಿದ್ದನೆಂದೂ ತನ್ನ ಹೆಸರನ್ನೊಳಗೊಂಡ ಅಗ್ರಹಾರವೊಂದನ್ನು ಬಹುಶಃ ಬೆಳಗೊಳದ ಸಮೀಪದಲ್ಲಿ ಸ್ಥಾಪಿಸಿದನೆಂದೂ ಹೇಳಬಹುದು. ಆದ್ದರಿಂದ ರಾಮಾನುಜರು ವಿಷ್ಣುವರ್ಧನನನ್ನು ಈ ಶಾಸನದ ಕಾಲಕ್ಕೂ ಮೊದಲೇ ಸಂಧಿಸಿರಬಹುದು. ಮೇಲುಕೋಟೆಯಲ್ಲಿ ರಾಮಾನುಜರು ಪ್ರತಿಷ್ಠಾಪಿಸಿದ ದೇವರು ತಿರುನಾರಾಯಣ. ವೈಷ್ಣವ ಗುರುಪರಂಪರೆಗಳ ಪ್ರಕಾರ ಇದು ನಡೆದುದು ಕ್ರಿ.ಶ. ೧೦೯೮ನೆಯ ಡಿಸೆಂಬರ್ ೧೬ರಂದು. ಪ್ರಸ್ತುತ ಶಾಸನ ಇದಕ್ಕೂ ಸುಮಾರು ಒಂದು ತಿಂಗಳ ಮುಂಚೆಯೇ ಹುಟ್ಟಿದೆ. ತಿರುನಾರಾಯಣ ಎಂಬ ಹೆಸರನ್ನು ವ್ಯಕ್ತಿನಾಮವಾಗಿ ಈ ವೇಳೆಗಾಗಲೇ ಬಳಸುತ್ತಿದ್ದರೆಂದೂ ಮೇಲುಕೋಟೆಯ ತಿರುನಾರಾಯಣದೇವರು ಇದಕ್ಕೂ ಮೊದಲೇ ಖ್ಯಾತಿವೆತ್ತಿದ್ದರೆಂದೂ ರಾಮಾನುಜರು ಬಹುಶಃ ಆ ವೇಳೆಗಾಗಲೇ ಪ್ರತಿಷ್ಠಿತವಾಗಿದ್ದ ದೇವರನ್ನು ಆರಾಧಿಸಿ, ಶಿಥಿಲಗೊಂಡಿದ್ದ ದೇವಾಲಯವನ್ನು ಜೀರ್ಣೋದ್ಧಾರಗೊಳಿಸುವುದರ ಮೂಲಕ ಅದರ ಖ್ಯಾತಿಗೆ ಕಾರಣರಾದರೆಂದೂ ಊಹಿಸಬೇಕಾಗುತ್ತದೆ ಎಂದು ಡಾ. ಕೃಷ್ಣ ವಿವರಿಸಿದ್ದಾರೆ.

---

[1] ಮಾನವಿಕ ಕರ್ನಾಟಕ, ಸಂ. 2, ಸಂಚಿಕೆ 2, ಪು. 7–15.

[2] ಎಂ ಎ ಆರ್., 1944, ನಂ. 11, ಪು. 54.

ಕೊಙ್ಗುಕೊಂಡ ವಿಷ್ಣುವರ್ಧನ ಪೋಸಳದೇವಚತುರ್ವೇದಿಮಂಗಲ ಎಂಬುದು ವಳೈಕುಳವ್(ಬೆಳಗೊಳ)ಗೆ ಇನ್ನೊಂದು ಹೆಸರೆಂಬುದು ಶಾಸನದಲ್ಲಿಯೇ ಸ್ಪಷ್ಟವಾಗಿದೆ. ರಾಮಲಕ್ಷ್ಮಣರನ್ನು ಪ್ರತಿಷ್ಠಾಪಿಸಿದಾತ ಇರೈಅಪ್ಪನ್. ವಳೈಅಣ್ಣನ್ ಮುಂತಾದವರು ಅಗ್ರಹಾರದ ಮಹಾಜನಗಳು. ಎಲ್ಲಕ್ಕೂ ಮಿಗಿಲಾಗಿ ಡಾ. ಕೃಷ್ಣರವರು ಶಾಸನದಲ್ಲಿ ನೀಡಿರುವ ಸಂವತ್ಸರಾದಿ ವಿವರಗಳನ್ನು ೧೦೯೮ನೆಯ ವರ್ಷಕ್ಕೆ ಸರಿಹೊಂದಿಸಿರುವುದರಿಂದ ಮೇಲಿನ ಎಲ್ಲ ಊಹೆಗಳೂ ಉದ್ಭವಿಸಿವೆ. ಶಾಸನವನ್ನು ಪರೀಕ್ಷಿಸಿದರೆ ಲಿಪಿಯ ಆಧಾರದಮೇಲೆ ಸ್ಪಷ್ಟವಾಗಿ ಅದು ೧೩–೧೪ನೆಯ ಶತಮಾನಕ್ಕೆ ಸೇರಿದ ಶಾಸನವೆನ್ನಬಹುದೇ ಹೊರತು ಅದನ್ನು ೧೧ನೆಯ ಶತಮಾನದ್ದೆಂದು ಹೇಳಲಾಗದು. ಸಂವತ್ಸರ ಹಾಗೂ ಇತರ ವಿವರಗಳು ೧೩೩೮ನೆಯ ನವೆಂಬರ್ ೯ಕ್ಕೆ ಸರಿಹೋಗುತ್ತವೆ. ಅಂದು ಚಿತ್ತಾನಕ್ಷತ್ರವಿದ್ದು ವಿಶಾಖಾನಕ್ಷತ್ರ ಅದರ ಮುಂದಿನ ದಿನ ಬರುತ್ತದೆ. ಎಂದಮೇಲೆ ಮೇಲಿನ ಎಲ್ಲ ವಾದಗಳೂ ಅಪ್ರಸ್ತುತವೆಂದಾಗುತ್ತದೆ. ಬೆಳಗೊಳಕ್ಕೆ (ಕೊಙ್ಗುಕೊಂಡ) ವಿಷ್ಣುವರ್ಧನ ಪೋಸಳದೇವಚತುರ್ವೇದಿಮಂಗಲ ಎಂಬ ಹೆಸರು ಎಂದು ಬಂದಿತು ಎಂದು ಸಹ ಹೇಳಲಾಗದು. ಕೊಙ್ಗುದೇಶವನ್ನು ಮುಮ್ಮಡಿ ಬಲ್ಲಾಳನು ಪಾಂಡ್ಯರನ್ನು ಸೋಲಿಸಿ ಪುನಃ ವಶಪಡಿಸಿಕೊಂಡನೆಂದೂ, ಸುಮಾರು ೧೩೧೮ರ ನಂತರ ವಿಷ್ಣುವರ್ಧನ ಎಂಬ ಬಿರುದನ್ನು ಸಹ ಧರಿಸಿದನೆಂದೂ ನಮಗೆ ತಿಳಿದಿದೆ.[1] ಆದ್ದರಿಂದ ಶಾಸನೋಕ್ತ ಕೊಙ್ಗುಕೊಣ್ಡ ವಿಷ್ಣುವರ್ಧನ ಪೋಸಳದೇವನು ಮುಮ್ಮಡಿ ಬಲ್ಲಾಳನೇ ಆಗಿರಬಹುದಾದ ಸಾಧ್ಯತೆ ಇದೆ.

ಕ್ರಿ.ಶ. ೧೧೧೮ನೆಯ ಕೃಪೇ ೩ನೆಯ ಶಾಸನದಿಂದ ಪೊಯ್ಸಳಸೆಟ್ಟಿ ಎನಿಸಿದ ನೊಳಂಬಸೆಟ್ಟಿ ಎಂಬಾತನು ದೋರಸಮುದ್ರದ ಪಟ್ಟಣಸ್ವಾಮಿಯಾಗಿದ್ದನೆಂದು ತಿಳಿದುಬರುತ್ತದೆ. ಚವುಂಡಾಂಡಿ ಎಂಬುದು ಆತನ ಇನ್ನೊಂದು ಹೆಸರು. ಆತನ ಪತ್ನಿ ದೇಮಿಕಬ್ಬೆ ಕತ್ತರಿಘಟ್ಟದಲ್ಲಿ ತ್ರಿಕೂಟಜಿನಾಲಯವನ್ನು ಕಟ್ಟಿಸಿ ಅಲ್ಲಿ ಪೂಜಾದಿಗಳಿಗೆ ಅರ್ಹನಹಳ್ಳಿ ಎಂಬ ಗ್ರಾಮವನ್ನು ಮತ್ತು ಭೂಮಿ ಮನೆ ಇತ್ಯಾದಿಗಳನ್ನೂ ಕುಕ್ಕುಟಾಸನಮಲಧಾರಿದೇವರ ಶಿಷ್ಯರಾದ ಶುಭಚಂದ್ರಸಿದ್ಧಾಂತದೇವರಿಗೆ ದಾನವಾಗಿ ಕೊಟ್ಟಳು. ಈ ಯತಿ ಕೊಂಡಕುಂದಾನ್ವಯದ ಮೂಲಸಂಘ, ದೇಸಿಗಗಣ, ಪೊಸ್ತಕಗಚ್ಛಕ್ಕೆ ಸೇರಿದವನಾಗಿದ್ದು ಈ ಸಂಘ, ಗಣ, ಗಚ್ಛಗಳಿಗೆ ಸೇರಿದವರನ್ನು ಹೊರತುಪಡಿಸಿ ಇತರರಿಗೆ ಆಸ್ತಿಯ ಮೇಲೆ ಯಾವ ವಿಧವಾದ ಹಕ್ಕೂ ಇಲ್ಲವೆಂದು ಶಾಸನದಲ್ಲಿ ಸ್ಪಷ್ಟಪಡಿಸಿದೆ.

ಕೃಪೇ ೭೦ನೆಯ ವಿಷ್ಣುವರ್ಧನನ ಶಾಸನದಲ್ಲಿ ಹೊಯ್ಸಳ ವಂಶಾವಳಿಯನ್ನು ಕೊಟ್ಟಿದೆ. ಅದರಂತೆ ಎಱೆಯಂಗನು ಉದಯಾದಿತ್ಯನ ಮಗನಾಗಿದ್ದು, ಬಲ್ಲಾಳ, ವಿಷ್ಣುವರ್ಧನ ಮತ್ತು ಉದಯಾದಿತ್ಯರು ಎಱೆಯಂಗನ ಮಕ್ಕಳಾಗಿ ಕಾಣಿಸಿಕೊಂಡಿದ್ದಾರೆ. ಎಱೆಯಂಗನ ತಂದೆಯ ಹೆಸರು ವಿನಯಾದಿತ್ಯ ಎಂಬುದು ನಮಗೆ ತಿಳಿದ ವಿಷಯ. ಅಪರೂಪವಾಗಿ ಉದಯಾದಿತ್ಯ ಎಂಬ ಹೆಸರು ಇಲ್ಲಿ ಕಾಣಿಸಿಕೊಂಡಿದೆ. ಬೈರಾಪುರದ ಮುಮ್ಮಡಿ ನರಸಿಂಹನ ಶಾಸನ(ಕೃಪೇ ೯೮)ದಲ್ಲಿ ಎಱೆಯಂಗನ ಮಕ್ಕಳಲ್ಲಿ ಮೂರನೆಯವನಾದ ಉದಯಾದಿತ್ಯನನ್ನು ವಿನಯಾದಿತ್ಯನೆಂದು ಕರೆದಿದೆ. ಇದೂ ಒಂದು ಅಪರೂಪದ ವಿಷಯವೇ. ಇವೆರಡೂ ಪದ್ಯಶಾಸನಗಳೇ. ಶಾಸನಲೇಖಕರು ಒಂದಕ್ಕೆ ಬದಲು ಇನ್ನೊಂದು ಹೆಸರನ್ನು ಬಳಸಿದ್ದಾರೆ ಎಂದು ಊಹಿಸಬಹುದು. ವಿನಯಾದಿತ್ಯ, ಉದಯಾದಿತ್ಯ ಎಂಬ ಹೆಸರುಗಳು ಅಂದು ಪರಿಚಿತವಾದ ಹೆಸರುಗಳಾಗಿದ್ದು ವಿನಯಾದಿತ್ಯನನ್ನು ಉದಯಾದಿತ್ಯನೆಂದೂ, ಉದಯಾದಿತ್ಯನನ್ನು ವಿನಯಾದಿತ್ಯನೆಂದೂ ಕರೆದಿರಬಹುದಾದ ಸಾಧ್ಯತೆ ಇದೆ. ಅಥವಾ ವಿನಯಾದಿತ್ಯನಿಗೆ ಉದಯಾದಿತ್ಯನೆಂಬ, ಉದಯಾದಿತ್ಯನಿಗೆ ವಿನಯಾದಿತ್ಯನೆಂಬ ಹೆಸರೂ ಪ್ರತಿನಾಮವಾಗಿ ಬಳಕೆಯಲ್ಲಿದ್ದಿರಬಹುದು.

ಮೊದಲನೆಯ ನರಸಿಂಹನ ಎಂಟು ಶಾಸನಗಳಲ್ಲಿ ಎರಡು ವಾಸ್ತವಿಕವಾಗಿ ಅವನ ಆಳಿಕೆಯ ಕಾಲಕ್ಕೆ ಸೇರಿದವುಗಳಲ್ಲವೆನ್ನಬಹುದು. ಕೃಪೇ ೪೨ನೆಯ ತೆಂಗಿನಘಟ್ಟದ ಶಾಸನದಲ್ಲಿ ನರಸಿಂಹದೇವರು ದೋರಸಮುದ್ರದ ನೆಲೆವೀಡಿನಲ್ಲಿ ಆಳುತ್ತಿದ್ದನೆಂದಿದೆ. ಆದರೆ ಶಾಸನದಲ್ಲಿ ನೀಡಿರುವ ತೇದಿಯ ವಿವರಗಳು ತಪ್ಪಾಗಿವೆ. ಶಕವರ್ಷ ೧೦೫೫ ಎಂದು ಅಕ್ಷರಗಳಲ್ಲಿ ಬರೆದಿರುವ ಈ ಶಾಸನದ ತೇದಿಯ ಇತರ ವಿವರಗಳು ಹೇಮಳಂಬಿ ಸಂವತ್ಸರದ ಭಾದ್ರಪದ ಶುದ್ಧ ೫, ಬ್ರಿಹವಾರ. ಶಕವರ್ಷಕ್ಕೆ ಸಮಾನವಾದ ಸಂವತ್ಸರ ಪ್ರಮಾದಿಯಾಗಿತ್ತು. ಆ ವರ್ಷದಲ್ಲಿ ಶಾಸನೋಕ್ತ ತಿಥಿ ಆಗಸ್ಟ್ ೭, ಸೋಮವಾರ (ಕ್ರಿ.ಶ. ೧೧೩೩)ದಂದು ಬಂದಿತ್ತು. ಹೇಮಳಂಬಿಸಂವತ್ಸರಕ್ಕೆ ಸಮನಾದ ಶಕವರ್ಷ ೧೦೩೯ (೧೧೧೭). ಆ ವರ್ಷದಲ್ಲಿ ಇತರ ವಿವರಗಳು ಆಗಸ್ಟ್ ೫, ಶನಿವಾರಕ್ಕೆ ಸರಿಹೊಂದುತ್ತವೆ. ೧೧೧೭ರಲ್ಲಿ ನರಸಿಂಹ ಇನ್ನೂ ಹುಟ್ಟಿರಲೇ ಇಲ್ಲ ಎಂಬುದು ನೆನಪಿಡಬೇಕಾದ ಅಂಶ. ಆತ ೧೧೩೩ನೆಯ ವರ್ಷದಲ್ಲಿ ಹುಟ್ಟಿದ. ಶಾಸನದ ಕಾಲ ೧೧೩೩ ಎಂದಾದರೆ, ಆತನು ಹುಟ್ಟಿದ ವರ್ಷದಲ್ಲಿಯೇ, ಆತನ ಹೆಸರಿನಲ್ಲಿ ಶಾಸನವನ್ನು ಬರೆಸಲಾಯಿತು ಎಂದು ಊಹಿಸಬೇಕಾಗುತ್ತದೆ.

---

[1] J. D. M. Derrett : *The Hoysalas*, p. 155–56.

ಇಂಥದೇ ಇನ್ನೊಂದು ಶಾಸನ ಪಾಂಪು ೯೬. ಅರಸನು ರಾಜಧಾನಿ ಕೋಡಾಲದಲ್ಲಿ ಆಳುತ್ತಿದ್ದನೆಂದು ಶಾಸನದಲ್ಲಿ ಹೇಳಿದೆ. ಇದರಲ್ಲಿಯೂ ನೀಡಲಾದ ತೇದಿಯ ವಿವರಗಳು ಸರಿಯಾಗಿಲ್ಲ. ಶಕವರ್ಷ ೧೦೬೨ಕ್ಕೆ ಸಮನಾದ ಸಂವತ್ಸರ ರೌದ್ರಿ, ಶಾಸನದಲ್ಲಿ ಹೇಳಿದಂತೆ ಪ್ರಮಾಥಿ ಅಲ್ಲ; ಆ ವರ್ಷದ ಆಶ್ವಯುಜ ಶುದ್ಧ ೧೩ ಗುರುವಾರವಾಗಿತ್ತು, ಭಾನುವಾರವಲ್ಲ. ಶಾಸನದ ಕಾಲ ಕ್ರಿ.ಶ. ೧೧೪೦, ಸೆಪ್ಟೆಂಬರ್ ೨೬, ಗುರುವಾರ ಎಂದು ಭಾವಿಸಿದಲ್ಲಿ ನರಸಿಂಹನಿಗೆ ಆಗ ಇನ್ನೂ ೭ ವರ್ಷ ವಯಸ್ಸು. ಪಟ್ಟಕ್ಕೆ ಬಂದಿರಲಿಲ್ಲ. ಆದರೆ ಪುತ್ರೋತ್ಸವದಿಂದ ಪುಳಕಿತನಾದ ವಿಷ್ಣುವರ್ಧನ ಆ ದಿನದಿಂದಲೇ ನರಸಿಂಹನಿಗೆ ಯುವರಾಜ ಪದವಿಯನ್ನಿತ್ತನೆಂದು ತಿಳಿದಿದೆ. ೧೧೪೦ರಿಂದ ಆತನು ಮಗನನ್ನು ಬಹುಶಃ ತನ್ನೊಡನೆ ಕರೆದೊಯ್ಯುತ್ತಿದ್ದಿರಬಹುದು.

ತೊಣ್ಣೂರಿನ ಶಾಸನ(ಪಾಂಪು ೮೮)ದಲ್ಲಿ ಅರಸನನ್ನು ಜಗದೇಕಮಲ್ಲ ನಾರಸಿಂಹ ಹೊಯ್ಸಣದೇವನೆಂದು ಕರೆದಿದೆ. ನಾರಸಿಂಹ(I)ನಿಗೆ ಜಗದೇಕಮಲ್ಲನೆಂಬ ಬಿರುದಿದ್ದಿತೆಂಬುದು ತಿಳಿದ ವಿಷಯವೇ ಆಗಿದೆ. ಈತನ ದಂಡನಾಯಕರಲ್ಲಿ ಕೂತ್ತಾಣ್ಡಿ ಒಬ್ಬಾತ. ಈತ ಕಾರಿಕುಡಿಗೆ ಸೇರಿದವನು. ಕಾರಿಕುಡಿ ಕುತ್ತಾಣ್ಡಿದಣ್ಡನಾಯಕನೆನಿಸಿದ ಈತ ಯಾದವನಾರಾಯಣ ಚತುರ್ವೇದಿ ಮಂಗಲವೆನಿಸಿದ ತೊಣ್ಣೂರಿನಲ್ಲಿ ವೀಱ್ಱುರುನ್ದಪೆರುಮಾಳ್ ದೇವಾಲಯವನ್ನು (ತಿಲ್ಲೈಕೂತ್ತವಿಣ್ಣಗರ) ಕಟ್ಟಿಸಿ ಆ ದೇವರಿಗೆ ಗ್ರಾಮಗಳನ್ನು, ಭೂಮಿಗಳನ್ನು ದಾನವಾಗಿ ನೀಡಿದನು. ಶಾಸನದ ಕಾಲ ಕ್ರಿ.ಶ. ೧೧೫೭.

ಕೃಪೇ ೧೦೬ನೆಯ ಶಾಸನದಲ್ಲಿ ಅರಸನ ಹೆಸರು, ಶಕವರ್ಷ ಎರಡೂ ಲಭ್ಯವಾಗಿಲ್ಲ. ಆದರೆ ಶಾಸನಕಾಲದ ಇತರ ವಿವರಗಳು ಪಾರ್ಥಿವಸಂವತ್ಸರದ ಆಶಾಢ ಶುದ್ಧ ಪಾಡಿವ. ಅಂದು ಮಾಣಿಕ್ಯವೊಟಲಿನ ಹೊಯ್ಸಳಜಿನಾಲಯಕ್ಕೆ ಮಾಡಲಾದ ದಾನದ ಪ್ರಸ್ತಾಪ ಇದರಲ್ಲಿದೆ. ಬಸ್ತಿಗ್ರಾಮದ ಈ ಶಾಸನವನ್ನು ಜಿನ್ನೇದೇವರ ಬಸದಿಯ ಮುಂದಿರುವ ಮಾನಸ್ತಂಭದ ಮೇಲೆ ಕೆತ್ತಿದೆ. ಇದೇ ಬಸದಿಗೆ ಉತ್ತರ ದಿಕ್ಕಿನಲ್ಲಿ ಪಾಳುಮಂಟಪದ ತೊಲೆಕಲ್ಲಿನ ಮೇಲಿನ ಇನ್ನೊಂದು ಶಾಸನ (ಕೃಪೇ ೧೦೭)ದಲ್ಲಿ ದಣ್ಡನಾಯಕ ಪುಣಿಸಮಯ್ಯ ಕಟ್ಟಿಸಿದ ಬಸದಿಯ ಪ್ರಸ್ತಾಪವಿದೆ. ಈ ಶಾಸನ ವಿಷ್ಣುವರ್ಧನನ ಕಾಲದ್ದು. ಆದುದರಿಂದ ಕೃಪೇ ೧೦೬ನೆಯ ಶಾಸನದಲ್ಲಿ ನೀಡಲಾದ ತೇದಿಯ ವಿವರಗಳು ಕ್ರಿ.ಶ. ೧೧೬೫ನೆಯ ಜೂನ್ ೧೧ಕ್ಕೆ ಸಮನಾಗಿದೆ ಎಂದು ಭಾವಿಸಿ ಶಾಸನ ಮೊದಲನೆಯ ನರಸಿಂಹನದೆಂದು ಊಹಿಸಿದ್ದೇವೆ.

ಇಮ್ಮಡಿ ಬಲ್ಲಾಳನ ಶಾಸನಗಳಲ್ಲಿ ಆತನ ಅಧಿಕಾರಿಗಳಲ್ಲಿ ಪ್ರಮುಖರಾದ ದಂಡದಧಿಷ್ಠಾಯಕ, ಮಹಾಪಸಾಯ್ತ, ಹಿರಿಯಹೆಗ್ಗಡೆ ಮಾಚಯ್ಯ, ಮಹಾಪ್ರಧಾನ, ತಂತ್ರಾಧಿಷ್ಠಾಯಕ, ಹೆಗ್ಗಡೆ ಸುರಿಗೆಯ ನಾಗಯ್ಯ, ದಂಡನಾಯಕ ಅಚ್ಯುತಿಮಯ್ಯ, ಶ್ರೀಕರಣದ ಹೆಗ್ಗಡೆ ಎಱೆಯಣ್ಣಗಳ ಪ್ರಸ್ತಾಪವಿದೆ.

ಕ್ರಿ. ಶ. ೧೧೭೪ರಲ್ಲಿ ಮಹಾಪ್ರಧಾನ ಹೆಗ್ಗಡೆ ಮಾಚಯ್ಯನು ಹೆಗ್ಗಡೆ ಕೇಸಿಯಣ್ಣ ಮತ್ತು ಹೆಗ್ಗಡೆ ಕೊಮ್ಮಣ್ಣನವರೊಡಗೂಡಿ ಯಾದವನಾರಾಯಣ ಚತುರ್ವೇದಿಮಂಗಲದ ಲಕ್ಷ್ಮೀನಾರಾಯಣದೇವರಿಗೆ ಒಂದೆತ್ತಿನ ಗಾಣದ ಸುಂಕದ ತೆರಿಗೆಯನ್ನೂ, ಎಣ್ಣೆಯನ್ನೂ ದಾನಮಾಡಿದ (ಪಾಂಪು ೬೩). ಈ ಮೂವರನ್ನೂ ಶಾಸನದಲ್ಲಿ ಮಹಾಪ್ರಧಾನ, ಸರ್ವಾಧಿಕಾರಿಯ ಮಕ್ಕಳೆಂದು ಸೂಚಿಸಿದ್ದರೂ, ಆ ತಂದೆಯ ಹೆಸರನ್ನು ಹೇಳಿಲ್ಲ. ಮೂರು ವರ್ಷಗಳ ನಂತರದ (ಕ್ರಿ. ಶ. ೧೧೭೭) ಅದೇ ತೊಣ್ಣೂರು ಗ್ರಾಮದ ಇನ್ನೊಂದು ಶಾಸನದಲ್ಲಿ (ಪಾಂಪು ೮೦) ಮಹಾಪ್ರಧಾನ, ಸರ್ಬ್ಬಾಧಿಕಾರಿ, ತಂತ್ರಾಧಿಷ್ಠಾಯಕ, ಮಹಾಪಸಾಯ್ತ, ಮಾಚಮಯ್ಯಗಳು, ಮಹಾಪ್ರಧಾನ, ಸರ್ಬಾಧಿಕಾರಿ, ದಂಡನಾಯಕ, ಹೆಗ್ಗಡೆ ಕೇಸಿಯಣ್ಣ, ಹೆಗ್ಗಡೆ ಕೊಮ್ಮಣ್ಣ, ಹೆಗ್ಗಡೆ ಮಹದೇವಣ್ಣರೊಡಗೂಡಿ ದೇವದಾನ ಮಾಡಿದ ಪ್ರಸ್ತಾಪವಿದೆ. ಇದರಲ್ಲಿ ಹೆಸರಿಸಲಾದ ಮಾಚಮಯ್ಯ, ಕೇಸಿಯಣ್ಣ, ಕೊಮ್ಮಣ್ಣಗಳೂ ಮೇಲಿನ ಶಾಸನದಲ್ಲಿ ಪ್ರಸ್ತಾಪಿಸಲ್ಪಟ್ಟಿರುವವರೂ ಭಿನ್ನರಲ್ಲ. ಮಾಚಮಯ್ಯನ ನಂತರ ಕಾಣಿಸಲಾದ ದಂಡನಾಯಕನ ಹೆಸರು ಇಲ್ಲ. ಹೆಗ್ಗಡೆ ಕೇಸಿಯಣ್ಣನೇ ಮಹಾಪ್ರಧಾನ, ಸರ್ಬ್ಬಾಧಿಕಾರಿ, ದಂಡನಾಯಕನಾಗಿದ್ದನೆಂದು ಹೇಳಲಾಗದು.

ಕ್ರಿ. ಶ. ೧೧೭೫ರ ತೊಣ್ಣೂರು ಶಾಸನದಿಂದ (ಪಾಂಪು ೭೯) ಸುರಿಗೆಯ ನಾಗಯ್ಯನು ಇಮ್ಮಡಿ ಬಲ್ಲಾಳನ ಮಹಾಪ್ರಧಾನ, ಸರ್ಬ್ಬಾಧಿಕಾರಿ, ಮಹಾಪಸಾಯ್ತ ಮತ್ತು ತಂತ್ರಾಧಿಷ್ಠಾಯಕ ಆಗಿದ್ದನೆಂಬುದು ತಿಳಿದುಬರುತ್ತದೆ. ಈತನು ವಿಷ್ಣುವರ್ಧನನ ಅಧಿಕಾರಿಗಳಲ್ಲೊಬ್ಬನಾಗಿದ್ದನೆಂದು ಈಗಾಗಲೇ ಗುರುತಿಸಿದ್ದೇವೆ.

ತೊಣ್ಣೂರಿನ ಮತ್ತೊಂದು ಶಾಸನದಲ್ಲಿ (ಪಾಂಪು ೭೪) ದಣ್ಡನಾಯಕ ಅಚ್ಯುತಿಮಯ್ಯ ಹಾಗೂ ವೀರಯ್ಯಗಳು ಯಾದವಗಿರಿಯ ಕೋಟೆಯ ರಕ್ಷಾಪಾಳಕರಾಗಿದ್ದಾಗ ಕ್ರಮವಾಗಿ (?) ಅವರ ಮಕ್ಕಳಾದ ನೀಲಯ್ಯ, ಚಾಮಯ್ಯಗಳು ತಮ್ಮ ಕೋಟೆಯ ಹೊಲಗಾಹುವಿತ್ತಿಯನ್ನು ಆಳುತ್ತಿದ್ದು ತೊಂಡನೂರಗ್ರಹಾರದ ಗಡಿಯಲ್ಲಿದ್ದ ನಖರೇಶ್ವರದೇವರಿಗೆ ಭೂದಾನ ಮಾಡಿದುದಾಗಿ ಹೇಳಿದೆ. ಯಾದವಗಿರಿಯ ಕೋಟೆಗೆ ಇಬ್ಬರು ದಂಡನಾಯಕರು ರಕ್ಷಾಪಾಳಕರಾಗಿದ್ದರೆಂಬುದು ಕುತೂಹಲವಾದ

ಅಂಶ. ಅವರಿಬ್ಬರ ಮಕ್ಕಳು ಕೋಟೆಯ ಹೊಲಗಾಹುವೃತ್ತಿಯನ್ನು ಆಳುತ್ತಿದ್ದರೆಂದಿದೆ. ಕೋಟೆಯ ಹೊಲಗಾಹುವೃತ್ತಿ ಎಂದರೆ ಕೋಟೆಯ ಪ್ರದೇಶ (ಹೊಲ=ಪ್ರದೇಶ) ಕಾಯಲು ನೀಡಲಾದ ವೃತ್ತಿ ಎಂದು ಅರ್ಥೈಸಬಹುದು.

ಕ್ರಿ. ಶ. ೧೧೭೫ನೆಯ ವರ್ಷದ ಎರಡು ಶಾಸನಗಳಲ್ಲಿ (ಪಾಂಪು ೧೫, ೭೪) ಶ್ರೀಕರಣದ ಕಲಿಯಣ್ಣನ ಪ್ರಸ್ತಾಪವಿದೆ. ಎರಡೂ ಶಾಸನಗಳ ತೇದಿ ಒಂದೇ. ಒಂದು (ಪಾಂಪು ೭೪) ತೊಣ್ಣೂರು ಗ್ರಾಮದಲ್ಲಿದೆ. ಇದರಲ್ಲಿ ಕಲಿಯಣ್ಣನು ಶ್ರೀಕರಣದ ಹೆಗ್ಗಡೆ ಎಚಿಯಣ್ಣನ ಕೈಯ್ಯಲು ಕ್ರಯದಾನವಾಗಿ ಪಡೆದ ಒಂಭತ್ತು ವೃತ್ತಿಯನ್ನು ಕಾಂಚೀಪುರದ ಅಲ್ಲಾಳಪೆರುಮಾಳದೇವರಿಗೆ ದಾನ ನೀಡಿದನೆಂದಿದೆ. ಇದೇ ದಿನದಂದು (ಕ್ರಿ.ಶ. ೧೧೭೫ರ ನವೆಂಬರ್ ೧೬) ಈ ಶ್ರೀಕರಣದ ಕಲಿಯಣ್ಣನ ಕೊಡಗೆಯೊಳು ಅಯ್ವತ್ತು ಕೊಳಗ ಗದ್ದೆಯನ್ನು ಸಾವಿರ ಕೊಳಗ ಬೆದ್ದಲೆಯನ್ನು ಶ್ರೀಕರಣದ ಹೆಗ್ಗಡೆ ಎಚಿಯಣ್ಣನ ಕಯ್ಯಲ್ಲಿ ಬಲ್ಲಾಳದೇವರಿಗೆ ಕ್ರಯದ ಹೊನ್ನುಕೊಟ್ಟು ಕೊಡೆಹಾಳ ಬಸದಿಗೆ ದತ್ತಿ ಬಿಟ್ಟಿದೆ. ಯೆಚಿಯಣ್ಣ ದತ್ತಿ ನೀಡಿದಾತ. ಕಲಿಯಣ್ಣನ ಕೊಡಗೆಯೊಳು ಎಂದರೆ, ಮೇಲಿನ ಶಾಸನದಲ್ಲಿ ಕಲಿಯಣ್ಣ ನೀಡಿದ ದತ್ತಿಯಲ್ಲಿ ಎಂದು ಅನ್ವಯಿಸಿದರೆ, ಅಲ್ಲಾಳ ಪೆರುಮಾಳದೇವರಿಗೆ ಬಿಡಲಾದ ದತ್ತಿಯಲ್ಲಿ ಇಂತಿಷ್ಟು ಭೂಮಿಯನ್ನು ಯೆಚಿಯಣ್ಣ ಹಣನೀಡಿ ಪಡೆದು ಬಸದಿಗೆ ದಾನಮಾಡಿದನೆನ್ನಬಹುದೇನೋ. ಹಾಗಿದ್ದಲ್ಲಿ ತಾನೇ ಮೊದಲು ಮಾರಿದ್ದ ಭೂಮಿಯಲ್ಲಿ ಸ್ವಲ್ಪಭಾಗ ಮತ್ತೆ ಕೊಂಡಂತಾಗುತ್ತದೆ. ಈ ಶಾಸನ ದೊರಕಿರುವುದು ಕ್ಯಾತನಹಳ್ಳಿ ಗ್ರಾಮದಲ್ಲಿ. ಕೊಡೆಹಾಳಬಸದಿಗೂ, ಈ ಗ್ರಾಮಕ್ಕೂ ಹೇಗೆ ಸಂಬಂಧ ಎಂಬುದು ತಿಳಿಯದು. ಆ ಹೆಸರಿನ ಬಸದಿಯೊಂದು ಗ್ರಾಮದಲ್ಲಿ ಆಗ ಇದ್ದಿರಬಹುದು.

ಅಗ್ರಹಾರ ಬಾಚಹಳ್ಳಿಯ ಶಾಸನ (ಕೃಪೇ ೭೭) ಮಹಾಸಾಮಂತ ಬಬ್ಬೆಯನಾಯಕನು 'ಬಲ್ಲಾಳುದೇವಂ ಕರದು ಸಂಕಮದೇವನ ಕಟಕದದ ಕಾದುವುದೆಂದು ಬೆಸಸಿ ವೀಳೆಯಮ' ಕೊಟ್ಟು ಬೀಳ್ಕೊಟ್ಟಾಗ ಯುದ್ಧಕ್ಕೆ ತೆರಳಿ ಶತ್ರುಗಳೊಡನೆ ಹೋರಾಡಿ ೧೧೭೯ನೆಯ ವರ್ಷದ ಜೂನ್–ಜುಲೈ ತಿಂಗಳುಗಳಲ್ಲೊಂದು ದಿನ ವೀರಸ್ವರ್ಗವನ್ನೆಯ್ದಿದುದನ್ನು ತಿಳಿಸುತ್ತದೆ. ಈ ಸಂಕಮನು ಕಲಚುರಿ ಅರಸ ಸಂಕಮದೇವ. ಚಾಲುಕ್ಯರ ಬಲ ಕುಗ್ಗಿದ ಸಂದರ್ಭವನ್ನುಪಯೋಗಿಸಿ ಅವರ ರಾಜ್ಯದ ದಕ್ಷಿಣ ಮೇರೆಯಮೇಲೆ ನುಗ್ಗಿದ ಕಲಚುರಿ ಅರಸ ಸಹಜವಾಗಿಯೇ ಹೊಯ್ಸಳ ಇಮ್ಮಡಿ ಬಲ್ಲಾಳನನ್ನೆದುರಿಸಬೇಕಾಯಿತು. ವಾಸ್ತವವಾಗಿ ಈಗ ನಡೆದ ಕದನದಲ್ಲಿ ಬಲ್ಲಾಳ ಸೋತು ಹಿಮ್ಮೆಟ್ಟಬೇಕಾಯಿತು.

ಸಿಂದೆಘಟ್ಟದ ಶಾಸನ (ಕೃಪೇ ೮೬) ಕುತೂಹಲಕಾರಿಯಾಗಿದೆ. ಸಂಗಮೇಶ್ವರಪುರವೆನಿಸಿದ ಸಿಂದಘಟ್ಟದ ಮಹಾಜನಗಳು ಅಲ್ಲಿನ ಲಕ್ಷ್ಮೀನಾರಾಯಣ ದೇವಸ್ಥಾನಕ್ಕೆ ಸಲ್ಲುವ ಎರಡು ವೃತ್ತಿಗಳನ್ನು ಗಂಡಸೆಯ ದೇವಂಣನ ಮಗನಾದ ಮಾದಂಣ ಮತ್ತು ಬೊಮ್ಮಣ್ಣಗಳಿಗೆ ೪೬ ವರಾಹ ಗದ್ಯಾಣವನ್ನು ಪಡೆದು ಮಾರಿದರು. ಆ ದೇವಸ್ಥಾನದ ಪೂಜೆಯ ಹಕ್ಕನ್ನೂ (ದೇವರಸ್ಥಾನವನೂ) ಸಹ ಇವರೀರ್ವ್ವರು ಪಡೆದರು. ಆದರೆ ಆ ಊರಿನಿಂದ ದೇವರಿಗೆ ಬರುವ ಸಿದ್ದಾಯವನ್ನು ಪಡೆಯುವ ಹಕ್ಕನ್ನು ಮಾತ್ರ ಮಹಾಜನಗಳು ತಾವೇ ಉಳಿಸಿಕೊಂಡರು. ಅದರ ಫಲವಾಗಿ ಹಲವು ಜವಾಬ್ದಾರಿಗಳನ್ನೂ ಮಹಾಜನರೇ ಹೊರಬೇಕಾಯಿತು. ಆ ದೇವರ ವೃತ್ತಿಗೆ ತೆರಬೇಕಾದ ಸೇಸೆ, ಸಿಥಾಯ, ಅಳಿಉ, ಅನ್ಯಾಯ, ಕಟಕಸೇಸೆ, ಆನೆಸೇಸೆ, ಪುತ್ರೋತ್ಸಾಹ, ಬಾಸಿಗದೆಱೆ ಮುಂತಾಗಿ ಬಂದ ಬಾಧೆಗಳನ್ನು ತಾವೇ ಪರಿಹರಿಸಿಕೊಳ್ಳಲು (ಅಂದರೆ, ತೆರಿಗೆಗಳನ್ನು ತಾವೇ ಕೊಡಲು) ಹಾಗೂ ದೇವಾಲಯದ ಜೀರ್ಣೋದ್ಧಾರ ಮಾಡಿಸಲು (ಸೋರಿಬಿದಡೆಉ ಮೇಲುಗೆಲಸ ಸೊದೆ ಇದೇನನದು ಬಿಟು ದೇರಿಗೇನು ಬಾಧೆ ಆದಡೆಉ) ಸಹ ಅವರೇ ಜವಾಬ್ದಾರರು. ದೇವರಿಗೆ ಕಾಲಕ್ಕೆ ತಕ್ಕಂತೆ ಪೂಜಾದಿಗಳನ್ನು ನಡಸಿಕೊಂಡು ಹೋಗುವ ಹೊಣೆ ಮಾತ್ರ ಈ ಇಬ್ಬರದು. ಆ ಎರಡು ವೃತ್ತಿಗೆ ಹಳಿಹಿರಿಊರೊಳಗಣ ಕೊಡಗಿದೆಱೆ, ಬಿನುಗುದೆಱೆ ಮುಂತಾದ ತೆರಿಗೆಗಳಿಂದ ಬಂದ ಆದಾಯವನ್ನು ಸಹ ಇವರೇ ಅನುಭವಿಸುವರು. ಇದು ಶಾಸನದ ಸಾರಾಂಶ. ಇದರಿಂದ ಒಂದು ಅಂಶ ವ್ಯಕ್ತವಾಗುತ್ತದೆ. ಮಹಾಜನರು ತೆರಬೇಕಾದ ತೆರಿಗೆಗಳಿಗಿಂತ ಹೆಚ್ಚಿನ ಪಾಲು ಅವರಿಗೆ ಆ ದೇವರಿಗೆ ಊರಿಂದ ಬರುವ ಸಿಥಾಯದಿಂದ ದೊರೆಯುತ್ತಿರಬೇಕು. ಎಂತಲೇ ಇತರ ತೆರಿಗೆಗಳನ್ನೂ ತಾವೇ ತೆತ್ತು, ಜೀರ್ಣೋದ್ಧಾರದ ಕಾರ್ಯವನ್ನು ಸಹ ತಾವೇ ಮಾಡುವ ಹೊಣೆ ಅವರು ಹೊತ್ತಿದ್ದರು.

ಶ್ರೀಪ ೧ ಶ್ರೀರಂಗಪಟ್ಟಣದ ರಂಗನಾಥ ದೇವಾಲಯದ ಪ್ರಾಚೀನತೆಯನ್ನು ಸೂಚಿಸುವ ಒಂದು ಶಾಸನ. ಗರ್ಭಗೃಹದ ಹೊರಗೋಡೆಯ ತಳಪಾದಿಕಲ್ಲಿನಲ್ಲಿರುವ ಈ ಶಾಸನದ ಕಾಲ ಕ್ರಿ.ಶ. ೧೨೦೦. ತೊಣ್ಣೈಕೂಡು ಶ್ರೀವು. ಮಂಗಲದ ನಾರಾಯಣನ ಮಗನಾದ ತಿರುವರಙ್ಗಮುಡೈಯಾನನಿಗೆ ಕಲ್ಪಗಂಕೊಣ್ಡಾಳ್ ಎಂಬ ಪತ್ನಿಯಲ್ಲಿ ಜನಿಸಿದ ವರನ್ತರುವ್ ಪೆರುಮಾನ್ ಎಂಬಾತನು ಬ್ರಹ್ಮಪುರವೆನಿಸಿದ ಚತುರ್ಮುಖನಾರಾಯಣ ಚತುರ್ವೇದಿಮಂಗಲವೆಂಬ ಗ್ರಾಮವನ್ನೂ ತಿರುವರಙ್ಗನಾರಾಯಣಚತುರ್ವೇದಿಮಂಗಲದ ಭಟ್ಟರಿಂದ ಕ್ರಯಕ್ಕೆ ಪಡೆದು ಅದರಲ್ಲಿನ ೭೫ ವೃತ್ತಿಗಳಲ್ಲಿ ೩೩ ವೃತ್ತಿಗಳನ್ನು ೮೮ ಬ್ರಾಹ್ಮಣರಿಗೆ ದಾನವಾಗಿ ನೀಡಿ ಆ ಗ್ರಾಮಕ್ಕೆ ಅಟಗಿಯಪೆರುಮಾಳ್‌ಪುರವೆಂಬ ಹೆಸರನ್ನು ಕೊಟ್ಟನೆಂದು ಶಾಸನ

ತಿಳಿಸುತ್ತದೆ. ಇದರಿಂದ ಶಾಸನದ ಕಾಲದ ವೇಳೆಗಾಗಲೇ ರಂಗನಾಥದೇವಾಲಯ ಕಟ್ಟಲ್ಪಟ್ಟಿತ್ತೆಂಬ ಅಂಶ ಸ್ಪಷ್ಟವಾಗುತ್ತದೆ. ತಿರುವರಙ್ಗನಾರಾಯಣಚತುರ್ವೇದಿಮಂಗಲ ಎಂಬ ಗ್ರಾಮದ ಹೆಸರು, ತಿರುವರಙ್ಗಮುಡೈಯಾನ್ ಎಂಬ ವ್ಯಕ್ತಿಯ ಹೆಸರು ರಂಗನಾಥದೇವರಿಗೆ ಸಂಬಂಧಿಸಿದವುಗಳೇ ಆಗಿವೆಯಾದಕಾರಣ ಶಾಸನದ ಕಾಲಕ್ಕೆ ಬಹಳ ಹಿಂದೆಯೇ ದೇವಾಲಯ ಅಸ್ತಿತ್ವಕ್ಕೆ ಬಂದಿರಬಹುದು. ಆದರೆ ಶಾಸನ ಗರ್ಭಗೃಹದ ತಳಪಾದಿ ಕಲ್ಲಿನಲ್ಲಿದೆ ಎಂಬುದು ಗಮನಾರ್ಹ. ಆದ್ದರಿಂದ ಈ ಸಮಯವನ್ನು ಬಹಳ ಹಿಂದಕ್ಕೊ ದೂಡಲಾಗದು.

ಕೃಪೇ ೧೦೧ನೆಯ ಚಿಟ್ಟನಹಳ್ಳಿ ಶಾಸನ ಬಹಳಷ್ಟು ಒಡೆದುಹೋಗಿದೆ. ಶಾಸನದಲ್ಲಿ ಉಕ್ತನಾದ ಶ್ರೀಕರಣದ ಹೆಗ್ಗಡೆಯು ಎಚಿಯಣ್ಣನೇ ಆಗಿರಬಹುದೆಂದು ನರಸಿಂಹಾಚಾರ್ಯ್ಯರು ಅಭಿಪ್ರಾಯಪಟ್ಟಿದ್ದಾರೆ.[1] ಇದು ಸಮರ್ಥನೀಯವಾದರೆ ಶಾಸನ ಇಮ್ಮಡಿ ಬಲ್ಲಾಳನ ಕಾಲದ್ದೆನ್ನಬಹುದು.

ತೊಣ್ಣೂರು (ಪಾಂಪು ೮೧) ಮತ್ತು ಅಗ್ರಹಾರಬಾಚಹಳ್ಳಿ (ಕೃಪೇ ೭೮) ಶಾಸನಗಳು ಎರಡು ಮಾತ್ರ ಇಮ್ಮಡಿ ನರಸಿಂಹನ ಕಾಲದವು. ಮೊದಲನೆಯ ಶಾಸನ (ಕ್ರಿ. ಶ. ೧೨೨೩)ದಲ್ಲಿ ಮಹಾಪ್ರಧಾನ ಹೆಗ್ಗಡೆಯಣ್ಣ ಮತ್ತು ಇನ್ನೊಬ್ಬ ಮಹಾಪ್ರಧಾನನು ಮಾಡಿದ ಗ್ರಾಮದಾನದ ಉಲ್ಲೇಖವಿದೆ. ಎರಡನೆಯ ಶಾಸನವನ್ನು ವೀರಗಲ್ಲೊಂದರ ಮೇಲೆ ಕೆತ್ತಲಾಗಿದೆ. ಕೇತಣನೆಂಬ ವೀರನೊಬ್ಬ ಹೊಯ್ಸಯನಾಯಕನ ದಾಳಿಯನ್ನೆದುರಿಸಿ ಹೆಣ್ಣುಸೆಱೆ ಗೋ ಮಹಿಷಿಗಳ ಮಗುಳ್ಚಿ ಅಸು ನೀಗಿದ. ಈತ ಮಹಾಸಾಮಂತ ಬಲ್ಲೆಯನಾಯಕನ ಜೊತೆಗೂಡಿ ಕಾದಿದ. ಈ ಬಲ್ಲೆಯನಾಯಕನನ್ನು ಕನ್ನಡಿಗಮೊನೆಯಾಳ್ತನಂ ಗೆಯ್ವರಿಗೆ ಸೇನಾನಾಯಕನೆಂದು ವರ್ಣಿಸಿದೆ. ಅದೇ ಗ್ರಾಮದ ಕ್ರಿ. ಶ. ೧೨೪೨ರ ಸೋಮೇಶ್ವರನ ಶಾಸನದಲ್ಲಿ ಗೋಪಿನಾಯಕನು ಕಂನಡಿಗಮಂನೆಯಳುತನಂಗೆಯ್ಯುತ್ತಿದ್ದನೆಂದು ಹೇಳಿದೆ. ಕಂನಡಿಗಮನೆಯ ಎಂಬುದೊಂದು ಪದವಿ ಎಂದು ಇದನ್ನು ಅರ್ಥೈಸ ಬಹುದಾದರೂ ಹಿಂದಿನ ಶಾಸನದಲ್ಲಿ ಬಲ್ಲೆಯನಾಯಕನು ಕಂನಡಿಗಮೊನೆಯಾಳ್ತನಂ ಗೆಯ್ವರಿಗೆ ಸೇನಾನಾಯಕನೆಂದಿರುವಾಗ, ಅಂತಹ ಅಧಿಕಾರಿಗಳಿಗೆ ಈತ ಸೇನಾನಾಯಕ ಎಂದು ಹೇಳಬಹುದೇ ?

ಗೋವಿಂದನಹಳ್ಳಿಯ ಕೃಪೇ ೪೯ನೆಯ ಶಾಸನ ಹೊಯ್ಸಳ ಸೋಮೇಶ್ವರನದು. ಇದರಲ್ಲಿ ಹೊಯ್ಸಳ ವಂಶದ ಆರಂಭವನ್ನು ಕುರಿತಾದ ಕತೆ ಇತರ ಶಾಸನೋಕ್ತ ಕತೆಗಳಿಗಿಂತ ಸ್ವಲ್ಪ ಭಿನ್ನವಾದುದಾಗಿದೆ. ಸಳನೆಂಬ ಅರಸ ತನ್ನ ಕುಲದೈವವಾದ ವಾಸಂತಿಕಾದೇವಿಯನ್ನು ಆರಾಧಿಸಲು ಶಶಪುರಕ್ಕೆ ಹೋಗಿದ್ದ. ಅಲ್ಲಿ ವೀತಾಯುಧವ್ರತ (ಆಯುಧಗಳನ್ನು ಧರಿಸದೆ ಇರುವ ವ್ರತ) ದಿಂದ ದೇವಿಯನ್ನು ಆರಾಧಿಸಿ ಮುನಿಯನ್ನು ಸತ್ಕರಿಸುತ್ತಿದ್ದಾಗ ಹುಲಿಯೊಂದು ಅಲ್ಲಿಗೆ ಬಂದಿತು. 'ಹೊಯ್ಸಳ' ಎಂದು ಮುನಿಯು ಸಳನಿಗೆ ಆದೇಶಮಾಡಿ ಶಲಾಕೆಯೊಂದನ್ನಿತ್ತನು. ಅದನ್ನುಪಯೋಗಿಸಿದ ಫಲವಾಗಿ ಹುಲಿ ಸತ್ತಿತು. ಎಂತಲೇ ಈತನ ವಂಶಸ್ಥರಿಗೆ ಹೊಯ್ಸಳರೆಂಬ ಹೆಸರು ಬಂದಿತು ಎಂದು ಶಾಸನ ಹೇಳುತ್ತದೆ.

ಕೃಪೇ ೬೯ರಲ್ಲಿ ಬೆಳ್ಳಿಯರ ಕುಲದ ಕಲ್ಲಗಾವುಂಡ ತನ್ನ ಮುತ್ತಜ್ಜನ ತಂದೆಯಾದ ದಮ್ಮಗವುಂಡನ ಹೆಸರಿನಲ್ಲಿ ದಮ್ಮೇಶ್ವರ ದೇವಾಲಯವನ್ನು ಕಟ್ಟಿಸಿ ದೇವರನ್ನು ಪ್ರತಿಷ್ಠಾಪಿಸಿದನೆಂದು ಹೇಳಿದೆ. ಈತನ ವಂಶಾವಳಿಯನ್ನು ಶಾಸನದಲ್ಲಿ ಕೊಟ್ಟಿದೆ. ಶಾಸನದ ಕಾಲ ಕ್ರಿ.ಶ. ೧೨೪೨. ಆಗ ಹೊಯ್ಸಳ ಸೋಮೇಶ್ವರ ಚೋಳರಾಜ್ಯದ ನೆಲೆವೀಡಿನಲ್ಲಿ ಆಳುತ್ತಿದ್ದ.

ಅರಕೆರೆಯ ಶ್ರೀಪ ೯೮ನೆಯ ಶಾಸನ ಸೋಮೇಶ್ವರನ ಆಳಿಕೆಯ ೨೧ನೆಯ ವರ್ಷದಲ್ಲಿ ಹುಟ್ಟಿದುದು. ಈ ಶಾಸನ ದೇವಸ್ಥಾನದ ದಕ್ಷಿಣ ತಳಪಾದಿಕಲ್ಲಿನಲ್ಲಿದೆ. ಆದರೆ ದೇವಸ್ಥಾನದ ಸುಖನಾಸಿಯ ಕಂಬವೊಂದರಲ್ಲಿರುವ ಶಾಸನದಲ್ಲಿ (ಶ್ರೀಪ ೧೦೪) ಸುರಿಗೆಯ ನಾಗಯ್ಯನ ಪ್ರಸ್ತಾಪವಿದೆ. ಈತ ವಿಷ್ಣುವರ್ಧನನ ಅಧಿಕಾರಿಯಾಗಿದ್ದನೆಂದು ಮೇಲೆ ಹೇಳಿದೆ. ಆದ್ದರಿಂದ ಬಹುಶಃ ಸೋಮೇಶ್ವರನ ಶಾಸನವನ್ನು ಅನಂತರ ತಳಪಾದಿ ಕಲ್ಲಿನಮೇಲೆ ಕಂಡರಿಸಿರಬೇಕು. ಅರಕೆರೆ ಅಂದು ಸರ್ವ್ವನಮಸ್ಯದ ಪಟ್ಟದ ಮಹಾಗ್ರಹಾರ ಸರ್ವಜ್ಞ ಶ್ರೀ ವೀರನಾರಸಿಂಹಪುರವೆನಿಸಿತ್ತು. ಆ ಗ್ರಾಮದ ಕುಮಂಡೂರಾಚನ ಹೆಂಡತಿ ಐಯ್ಯಿದ್ಯಕೆ ಆ ಗ್ರಾಮ ದಲ್ಲಿ ತನ್ನ ಪಾಲಿಗೆ ಬಂದ ಭೂಮಿಯ ವೃತ್ತಿಯಲ್ಲಿ ಕಾಲುಭಾಗವನ್ನು ಕೇಶವದೇವರಿಗೆ ತಿರುನಾಮದ ಕಾಣಿಕೆಯಾಗಿತ್ತಳು. ತಿರುನಾಮಕಾಣಿಕೆ ಎಂಬುದು ಶೈವದೇವಾಲಯಗಳಿಗೆ ಕೊಡಲಾದ, ಸೇರಿದ ಭೂಮಿಗೆ ಅನ್ವಯವಾಗುವ ಹೆಸರು. ಆದರೆ ಇಲ್ಲಿನ ಕೇಶವದೇವರು ವೈಷ್ಣವದೇವರು. ಇದನ್ನು ಗಮನಿಸಿದರೆ ತಿರುನಾಮಕಾಣಿಕೆ ಎಂಬುದು ಬಹಳ ಸಾಮಾನ್ಯವಾದ ಅರ್ಥದಲ್ಲಿ ದೇವಾಲಯಗಳಿಗೆ ನೀಡಿದ ಭೂಮಿ ಎನ್ನಬೇಕಾಗುತ್ತದೆ. ಶಾಸನದಲ್ಲಿ ಇದನ್ನು ಪ್ರೀತಿದಾನ ಎನ್ನಲಾಗಿದೆ. ದಾನಿ ಒಬ್ಬ ಸ್ತ್ರೀ. ಆಕೆಗೆ ಸೇರಿದ ವೃತ್ತಿಯಲ್ಲಿ ಒಂದು ಭಾಗವನ್ನು ದಾನ ನೀಡಿದಳೆಂಬುದನ್ನು ಗಮನಿಸಿದರೆ, ಸ್ತ್ರೀಯರೂ ಪ್ರತ್ಯೇಕವಾಗಿ ಭೂಮಿಯ ಒಡೆತನ ಪಡೆದಿದ್ದರು ಎಂದು ತೋರುತ್ತದೆ.

ಬೈರಾಪುರದ ಶಾಸನ (ಕೃಪೇ ೯೮)ದಲ್ಲಿ ನರಸಿಂಹ (III)ನ ಮಹಾಪ್ರಧಾನ ಸೋಮೆಯ ದಣ್ಣಾಯಕನ ಪ್ರಸ್ತಾಪ

---

1 ಎಂ ಎ ಆರ್., 1912 ಪು 43

ಬಂದಿದೆ. ಈತನು ಹೆಗ್ಗಡೆನಾಯಕ ಮತ್ತು ರೇಕಾದೇವಿಯರ ಮಗ. ಈತನ ಅಕ್ಕ ರೇಕವ್ವೆ ಒಬ್ಬ ದಂಣ್ನಾಯಕಿತ್ತಿ. ಈಕೆಯ ಮಗಳು ತಿಪ್ಪವ್ವೆ ; ಅಳಿಯ ಹಿರಿಯ ಭಂಡಾರದ ವೆಂಡೆಯದ ಮಾರೆಯನಾಯಕ; ಮೊಮ್ಮಗಳು ಸೋಯಕ್ಕ. ಬೊಮ್ಮಯ ನಾಯಕನ ಹಳ್ಳಿಯಲ್ಲಿ ಈಕೆ ಭೈರವೇಶ್ವರ ದೇವಸ್ಥಾನವನ್ನು ಕಟ್ಟಿಸಿ, ಆ ಗ್ರಾಮವನ್ನು ಭೈರವಪುರವೆಂಬ ಅಗ್ರಹಾರವಾಗಿ ಪರಿವರ್ತಿಸಿ, ಆ ದೇವರ ಸ್ಥಾನವನ್ನು ಅಳಿಯ, ಮಗಳು ಮತ್ತು ಮೊಮ್ಮಗಳಿಗೆ ಪ್ರೀತಿದಾನವಾಗಿ ನೀಡಿದಳು. ಆ ಅಳಿಯ ಬಿಜ್ಜಲೇಶ್ವರಪುರವೆನಿಸಿದ ಮಾಚನಕಟ್ಟೆಯ ಸ್ಥಾನಿಕ.

ಕಾಚೇನಹಳ್ಳಿಯ ಶಾಸನ (ಪಾಂಪು ೨೫೫) ವೀರನಾರಸಿಂಹದೇವರಸನ ಆಳಿಕೆಗೆ ಸಂಬಂಧಿಸಿದುದಾಗಿದೆ. ಶಾಸನ ಸವೆದಿದ್ದು ವಿವರಗಳು ಹಾಳಾಗಿವೆ. ಆದರೆ ಶಾಸನದಲ್ಲಿ ನೀಡಲಾದ ತೇದಿಯ ವಿವರಗಳನ್ನು–ವಿಭವ ಸಂವತ್ಸರ ಫಾಲ್ಗುಣ ಬಹುಳ ಚತುರ್ದಸಿ, ಆದಿತ್ಯವಾರ–ಕ್ರಿ.ಶ. ೧೨೬೯, ಮಾರ್ಚಿ ೩ನೆಯ ದಿನದೊಂದಿಗೆ ಸಮೀಕರಿಸಬಹುದಾದ ಕಾರಣ ಶಾಸನೋಕ್ತ ಅರಸ ಹೊಯ್ಸಳ ಮುಮ್ಮಡಿ ನರಸಿಂಹನಾಗಿರಬಹುದು.

ಅಗ್ರಹಾರ ಬಾಚಹಳ್ಳಿಯ ಹುಣಸೇಶ್ವರ ದೇವಾಲಯದಲ್ಲಿರುವ ಎಂಟು ಶಾಸನಗಳಲ್ಲಿ (ಕೃಪೇ ೭೭–೮೪) ಐದು ವೀರಗಲ್ಲುಗಳ ಮೇಲೂ (ಕೃಪೇ ೭೭–೮೧) ಮೂರು (ಕೃಪೇ ೮೨–೮೪) ಕಂಬಗಳ ಮೇಲೂ ಕೆತ್ತಲ್ಪಟ್ಟ ಶಾಸನಗಳು. ಕೊನೆಯ ಮೂರು ಶಾಸನಗಳು ಸಹ ವಾಸ್ತವವಾಗಿ ವೀರರ ಸ್ಮಾರಕವಾದ ಶಾಸನಗಳೇ. ಕೃಪೇ ೮೩ನೆಯ ಶಾಸನದಲ್ಲಿ ವೀರನೊಬ್ಬ ಲೆಂಕನಾಗಿ ಗರುಡನನ್ನಪ್ಪಿ ಬಾಸೆಗೆ ಸಂದನೆಂದಿದ್ದರೂ, ಶಾಸನ ಅಸಂಪೂರ್ಣವಾಗಿದೆ. ಅಂತೆಯೇ ೮೦ನೆಯ ಶಾಸನ ಒಡೆದಿದ್ದು ಕೆಲವು ಹೆಸರುಗಳು ಮಾತ್ರ ಉಳಿದಿವೆ. ೮೧ನೆಯ ಶಾಸನ ಸವೆದಿದ್ದರೂ ಕೆಲಮಟ್ಟಿನ ವಿವರಗಳು ಲಭಿಸಿವೆ.

ಈ ಶಾಸನಗಳಲ್ಲಿ ಕಂಡುಬರುವ ವೀರರೆಲ್ಲಾ ಮುಗಿಲಕುಲಕ್ಕೆ ಸೇರಿದವರು. ಈ ಮನೆತನದಲ್ಲಿ ಲಭ್ಯವಿರುವ ಮೊದಲ ಹೆಸರು ಗಂಡನಾರಾಯಣಸೆಟ್ಟಿಯದು. ಈತ ಕಬ್ಬಾಹುನಾಡಿನ ಮಹಾಪ್ರಭುವಾಗಿದ್ದ. ಈತನ ವಂಶಜರೆಲ್ಲಾ ಹೊಯ್ಸಳರ ಮಹಾಸಾಮಂತರಾಗಿದ್ದರು.

ಗಂಡನಾರಾಯಣಸೆಟ್ಟಿಯ ಪತ್ನಿ ಮಾರವ್ವೆನಾಯಕಿತಿ. ಇವರೀರ್ವರು ಐವರು ಲೆಂಕರೊಡಗೂಡಿ ಹೊಯ್ಸಳ ಎಱೆಯಂಗನಿಗಾಗಿ ಗರುಡನನ್ನಪ್ಪಿ ಅವನೊಡನೆ ಸಂದರು. ಇವರೀರ್ವರ ಮಗ ಹೊಯ್ಸಳಸೆಟ್ಟಿ, ಸೊಸೆ ಮಾಚವ್ವೆ. ಅವರು ಬಿಟ್ಟಿದೇವನೊಡನೆ ಲೆಂಕರಾಗಿ ಸಂದರು. ೮೨ ಮತ್ತು ೮೪ನೆಯ ಶಾಸನಗಳಲ್ಲಿ ಹೊಯ್ಸಳಸೆಟ್ಟಿಗೂ ಮಾಚವ್ವೆ ನಾಯಕಿತಿಗೂ ಜನಿಸಿದ ಕೂರೆಯನಾಯಕನ ಪ್ರಸ್ತಾಪವಿದೆ. ಈತನೂ ಈತನ ಇಬ್ಬರು ಪತ್ನಿಯರಾದ ಮಾರವ್ವೆ ಮತ್ತು ಚಿಕ್ಕಮಾರವ್ವೆಯರೂ ಏಳು ಲೆಂಕರೊಡನೆ ನರಸಿಂಹ (I)ನಿಗೆ ಗರುಡರಾದರು.

ಬಬ್ಬೆಯನಾಯಕ ಹೊಯ್ಸಳಸೆಟ್ಟಿಯ ಇನ್ನೊಬ್ಬ ಮಗ. ಕೃಪೇ ೭೭ನೆಯ ಶಾಸನದಲ್ಲಿ ಈತನು ಇಮ್ಮಡಿ ಬಲ್ಲಾಳದೇವನ ಆಣತಿಯಂತೆ ಕಲಚುರಿ ಸಂಕಮನೊಡನೆ ಕಾದಿ ಸತ್ತನೆಂದು ಹೇಳಿದೆ. ಇದನ್ನು ಮೇಲೆ ಪ್ರಸ್ತಾಪಿಸಿದೆ. ಇದರಲ್ಲಿ ಹೊಯ್ಸಳಸೆಟ್ಟಿಯ ತಾಯಿ ಬೀಚವ್ವೆ ಎಂದಿದೆ. ಆದರೆ ಕೃಪೇ ೮೨ ಮತ್ತು ೮೪ರಲ್ಲಿ ತಾಯಿಯ ಹೆಸರು ಮಾರವ್ವೆನಾಯಕಿತಿ ಎಂದಿದೆ. ೭೭ನೆಯ ಶಾಸನದಿಂದ ಹೊಯ್ಸಳಸೆಟ್ಟಿಗೆ ಭೋಕಣ್ಣ ಮತ್ತು ಬಮ್ಮಚರೆಂಬಿಬ್ಬರು ಸೋದರರಿದ್ದರೆಂದು ತಿಳಿದಿದೆ.

೮೨ ಮತ್ತು ೮೪ನೆಯ ಶಾಸನಗಳಲ್ಲಿ ಬಬ್ಬೆಯನಾಯಕನ ಪ್ರಸ್ತಾಪವಿಲ್ಲದಿರುವುದು ಗಮನಾರ್ಹ. ಆದರೆ ಅವೆರಡೂ ಕ್ರಮವಾಗಿ ಸೋಮೇಶ್ವರ ಹಾಗೂ ಮುಮ್ಮಡಿ ನರಸಿಂಹನ ಕಾಲದ ಶಾಸನಗಳಾಗಿದ್ದು, ತಮ್ಮ ಹಿಂದಿನ ಅರಸರ ಕಾಲದಲ್ಲಿ ಜೀವ ಮುಡಿಪಿದ ಗರುಡರ ಪ್ರಸ್ತಾಪ ಮಾತ್ರ ಅವುಗಳಲ್ಲಿರುವ ಕಾರಣ ಬಬ್ಬೆಯನಾಯಕನ ವಿಷಯದ ಪ್ರಸ್ತಾಪ ಅವುಗಳಲ್ಲಿ ಅನಗತ್ಯವಾಗಿದ್ದಿರಬೇಕು.

೮೧ನೆಯ ಶಾಸನ ಸವೆದಿದೆ. ಅದರಲ್ಲಿ ಮಹದೇವನಾಯಕನ ಪ್ರಸ್ತಾಪವಿದೆ. ಈತನು ಬಬ್ಬೆಯನಾಯಕನ ಮಗನಾಗಿದ್ದಂತೆ ತೋರುತ್ತದೆ. ಈತನು ದಾಳಿಯೊಂದರಲ್ಲಿ ಸುರಲೋಕಪ್ರಾಪ್ತನಾದ.

ಕೂರೆಯನಾಯಕನ ಒಬ್ಬ ಮಗ ಮಹಾಸಾಮಂತ ಬಲ್ಲೆಯನಾಯಕ. ಈತನ ಕಟ್ಟಿದಲಗು ಬಲ್ಲಗೌಡನ ಮಗ ಕೇತಣ. ಹೊಯ್ಸಯನಾಯಕನ ದಾಳಿಯಲ್ಲಿ ಈ ವೀರನೂ ಬಹುಶಃ ಬಲ್ಲೆಯನಾಯಕನೂ ಕಾದಿ ಮಡಿಯುತ್ತಾರೆ. ಈ ದಾಳಿ ಬಹುಶಃ ಕೇವಲ ಗೋಗ್ರಹಣಕ್ಕೆ ಸಂಬಂಧಿಸಿದುದು (೭೮).

೮೨ ಮತ್ತು ೮೪ನೆಯ ಶಾಸನಗಳಲ್ಲಿ ಕೂರೆಯನಾಯಕ ಮಾರವೆನಾಯಕಿತಿಗಳಿಗೆ ಜನಿಸಿದ ಸಿವನೆಯನಾಯಕ ಬಲ್ಲಾಳದೇವ (II)ನೊಡನೆ ಗರುಡನಾಗಿ ಮಡಿದನೆಂದೂ, ನಂತರ ಆತನ ಮಗ ಲಕ್ಕೆಯನಾಯಕನು ತನ್ನ ಹೆಂಡತಿ ಗಂಗಾದೇವಿಯೊಡನೆ ಇಮ್ಮಡಿ ನಾರಸಿಂಗದೇವನೊಡನೆ ಬೆರಸಿ ಬಾಸೆಯ ಪೂರಯಿಸಿದನೆಂದು ಹೇಳಿದೆ. ಇವರೀರ್ವರ ಮಗ ಕನ್ನೆಯನಾಯಕ.

ಆತನ ಪತ್ನಿಯರು ವುಮ್ಮವ್ವೆ, ಜವನವ್ವೆ ಮತ್ತು ಕಲ್ಲವ್ವೆ. ಇವರು ಹತ್ತುಮಾನಿಸ ಲೆಂಕಿತಿಯರುಂ ಯಿಪ್ಪತ್ತೊಂದು ಮಾನಿಸ ಲೆಂಕರುಂ ಬೆರಸಿ ಗಜಮಸ್ತಕದಲ್ಲಿ ಆರುಬಾರಿ ಗರುಡನನಪ್ಪಿ ಬಾಸೆಯ ಪೂರಯಿಸಿದರು. ಇದು ಸೋಮೇಶ್ವರನೊಡನೆ. ಕನ್ನೆಯ ನಾಯಕನ ಮಗ ರಂಗೆಯನಾಯಕ ತನ್ನ ಪತ್ನಿಯರಾದ ಕೇತವ್ವೆ, ಹೊನ್ನವ್ವೆ ಮತ್ತು ಮಂಚವ್ವೆನಾಯಕಿತಿಯರೊಡಗೂಡಿ ನಾರಸಿಂಹ (III) ನೊಡನೆ ಮಡಿದನು.

ಈ ಶಾಸನಗಳಲ್ಲಿ ಬರುವ ವಿವರಗಳನ್ನು ಒಟ್ಟುಗೂಡಿಸಿ ಮುಗಿಲಕುಲದ ಈ ಗರುಡರ ವಂಶಾವಳಿಯನ್ನು ಹೀಗೆ ರೂಪಿಸಬಹುದು.




ಶಾಸನಗಳಲ್ಲಿ ಇವರನ್ನು ನಾನಾದೇಶಿಯಿಂ ಸೆಟ್ಟಿವಟ್ಟಮಂ ತಳೆದ ಗಂಡನಾರಾಯಣರು ಕಂನಡಿಗವೊನೆಯಾಳ್ತನಂಗೆಯ್ವ ಸೇನಾನಾಯಕರು, ಹೊಯ್ಸಳಲೆಂಕನಿಸ್ಸಂಕರು, ಕಬ್ಬಾಹುನಾಡಾಳ್ವರು, ಸೇವುಣ ಸೈನ್ಯವಿಭಾಡರು ಎಂದೆಲ್ಲಾ ವರ್ಣಿಸಿದೆ. ಈ ಸಮಯದಲ್ಲಿ ಹೊಯ್ಸಳ ಹಾಗೂ ಸೇವುಣರ ನಡುವೆ ನಡೆದ ಕಾಳಗದಲ್ಲಿ ಇವರು ವಿಶಿಷ್ಟ ಪಾತ್ರ ವಹಿಸಿರಬಹುದು. ಆದರೆ ಮುಖ್ಯವಾಗಿ ಇವರು ಹೊಯ್ಸಳರ ಗರುಡರಾಗಿದ್ದರು.

ಕೃಪೆ ೧೦೦ ಮುಮ್ಮಡಿ ಬಲ್ಲಾಳನ ಆಳಿಕೆಗೆ ಸೇರಿದ ಶಾಸನ. ಬೆಮತೂರಕಲ್ಲಿನ ಸೋಮೆಯದಣ್ಣಾಯಕನು ಕಂಪಿಲನ ಕೂಡೆ ಹೊಳಲಕೆರೆಯಲ್ಲಿ ಕಾದಿದಾಗ ಹಡಪದ ಸಾಯಣ್ಣನು ತನ್ನ ಒಡೆಯನ ಕೂಡೆ ತಾನೂ ಕಾದಿ, ಶತ್ರುಗಳನ್ನು ಹೊಯಿದು, ಸಾವನ್ನಪ್ಪಿದನೆಂದು ತಿಳಿಸುವ ಈ ವೀರಗಲ್ಲು ಕ್ರಿ. ಶ. ೧೩೦೩ನೆಯ ಏಪ್ರಿಲ್ ೧೮ರಂದು ನೆಡಲ್ಪಟ್ಟಿತು. ಕದನ ನಡೆದುದು ಹೊಳಲಕೆರೆಯಲ್ಲಿ. ಸತ್ತ ವೀರ ಚಿಟ್ಟನಹಳ್ಳಿಗೆ ಸೇರಿದವನು. ಎಂದೇ ವೀರಗಲ್ಲನ್ನು ಅವನ ಗ್ರಾಮದಲ್ಲಿ ನೆಡಲಾಗಿದೆ, ಶಾಸನೋಕ್ತ ಕಂಪ್ಪೆಲನು ಕುಮ್ಮಟದುರ್ಗದ ಪ್ರಭುವೆನಿಸಿದ ಕಂಪಿಲನೆನ್ನಬಹುದು. ಸೋಮೆಯದಣ್ಡನಾಯಕನು ಬೆಮತೂರಕಲ್ಲು. ಎಂದರೆ ಈಗಿನ ಚಿತ್ರದುರ್ಗದಲ್ಲಿ, ಆ ಪ್ರದೇಶದ ಅಧಿಕಾರಿಯಾಗಿದ್ದ ಸೇನಾನಿ.

ಪಾಂಪು ೧೩೪ನೆಯ ಮೇಲುಕೋಟೆಯ ಶಾಸನದ ಕಾಲ ಕ್ರಿ. ಶ. ೧೩೧೨. ಒಡೆದುಹೋಗಿರುವ ಈ ಶಾಸನದಲ್ಲಿ ಮಹಾಪ್ರಧಾನ ಮಾಧವದಣ್ಣಾಯಕನ ಪ್ರಸ್ತಾಪವಿದೆ. ಈತ ಬಲ್ಲಾಳನ ಪ್ರಧಾನರಲ್ಲಿ ಒಬ್ಬನಾಗಿದ್ದ ಪೆರುಮಾಳೆದಣ್ಡನಾಯಕನ ಮಗ.

ಕೃಪೇ ೧೦ ಮತ್ತು ೧೧ ಹರಿಹರಪುರದ ಶಾಸನಗಳು. ಕೃಪೇ ೧೧ರಲ್ಲಿ ಮೂರು ಬೇರೆ ಬೇರೆ ವರ್ಷಗಳಲ್ಲಿ ಮಾಡಲಾದ ದಾನಗಳ ಪ್ರಸ್ತಾಪವಿದೆ. ಕ್ರಿ.ಶ. ೧೩೧೦ನೆಯ ಫೆಬ್ರವರಿ ೧೪ರಂದು ಬಲ್ಲಾಳಮಹೀಪಾಲನು ಮೊಡೆವನಕೋಡಿ, ಚಂಡಿವೊಳೆ ಮತ್ತು ಕೊಡಲಗುಪ್ಪೆ ಎಂಬ ಕಾಲುವಳಿಗಳನ್ನು ರಾಜಗುರುವಾದ ಸರ್ವ್ವಜ್ಞ ವಿಷ್ಣುಭಟ್ಟಯನ ಮಗ ಹರಿಹರಭಟ್ಟೋಪಾಧ್ಯಾಯನಿಗೆ ದಾನವಾಗಿ ನೀಡಿದನು. ಆದರೆ ಕೆಲವೇ ದಿನಗಳಲ್ಲಿ (ಮಾರ್ಚ್ ೧೭ರಂದು) ಹರಿಹರಭಟ್ಟೋಪಾಧ್ಯಾಯನು ಆ ಗ್ರಾಮಗಳನ್ನು ವೃತ್ತಿಗಳಾಗಿ ವಿಭಜಿಸಿ ವಿಷ್ಣುವರ್ಧನಹರಿಹರಪುರದ ೧೩೭ ಮಹಾಜನರಿಗೆ ಬಿಟ್ಟುಕೊಟ್ಟನು. ಹನ್ನೆರಡು ವರ್ಷಗಳ ನಂತರ ಕ್ರಿ. ಶ. ೧೩೨೨ ಜನವರಿ ೨೫ರಂದು, ಅರಸನು ಹರಿಹರಪುರದ ಕಟ್ಟೆಗೆ ಬಿಜಯಂಗೈದ ಅವಸರದಲ್ಲಿ ಅಲ್ಲಿನ ಕಟ್ಟೆ ಕಾಲುವೆಗಳನ್ನು ನೋಡಿ ಅವುಗಳ ಸಂರಕ್ಷಣೆಗಾಗಿ ಹೆಜ್ಜುಂಕ ಮತ್ತು ನಾಡಸುಂಕಗಳಿಂದ ಬರುವ ಆದಾಯವನ್ನು ದಾನಮಾಡಿದನು. ಈ ದಾನವನ್ನು ಹರಿಹರಭಟ್ಟೋಪಾಧ್ಯಾಯನೂ ಮಹಾಜನರೂ ಸ್ವೀಕರಿಸಿದರು. ಕೃಪೇ ೧೦ರ ಕಾಲ ಕ್ರಿ. ಶ. ೧೩೧೧, ಜನವರಿ ೨೭. ಈ ಶಾಸನ ಬಹಳ ಸವೆದಿದ್ದು ವಿವರಗಳು ಉಳಿದುಬಂದಿಲ್ಲ. ತನ್ನ ಮಗನಿಗೆ ಹರಿಹರಭಟ್ಟೋಪಾಧ್ಯಾಯನು ಅರಸನ ಹೆಸರನ್ನು ಇಟ್ಟ ಕಾರಣ ಅಲ್ಲಿನ ಮಹಾಜನಗಳು ಬೆಳಹಳ್ಳಿ ಗ್ರಾಮದ ಕೆಲವು ಭೂಮಿಗಳನ್ನು ಆತನಿಗೆ ದಾನವಾಗಿ ನೀಡಿದರೆಂದು ಶಾಸನಕ್ಕೆ ಅರ್ಥಮಾಡಲಾಗಿದೆ. ದಾನಮಾಡಿದಾತ ಅರಸನೇ ಆಗಿರಬಹುದು ಎಂದು ಸಹ ಅರ್ಥೈಸಬಹುದಾಗಿದೆ. ಕೃಪೇ ೧೧ರಲ್ಲಿ ಹೇಳಿದಂತೆ ಮೊದಲು ದಾನ ನೀಡಿದುದನ್ನು ಪ್ರತಿಗ್ರಹಿಯು ಮಹಾಜನರಿಗೆ ಕೊಟ್ಟಕಾರಣ ಅರಸನು ಮತ್ತೊಮ್ಮೆ ಈ ಸಂದರ್ಭದಲ್ಲಿ ಭೂದಾನ ಮಾಡಿದನೆಂದು ಊಹಿಸಬಹುದೇನೋ!

## ವಿಜಯನಗರ

ಮೇಲುಕೋಟೆಯ ಕ್ರಿ. ಶ. ೧೩೬೯ನೆಯ ವರ್ಷದ ಶಾಸನ (ಪಾಂಪು ೧೭೪) ಬುಕ್ಕರಾಯ (I)ನ ಆಳಿಕೆಗೆ ಸೇರಿದೆ. ಮಯಿಲನಹಳ್ಳಿಯ ಕೆರೆಯ ಕೆಳಗಣ ಕುಂಬಾಜಿರಕಟ್ಟೆಯ ಕಾಡಿನಭೂಮಿ ತಿರುನಾರಾಯಣಪುರದ (ಮೇಲುಕೋಟೆ) ನಾರಾಯಣ ದೇವರಿಗೆ ಸೇರಿದ್ದು, ಆ ದೇವಸ್ಥಾನದ ಶ್ರೀವೈಷ್ಣವರು ಆ ಭೂಮಿಯನ್ನು ಉಳುತ್ತಿದ್ದವರಿಗೆ ಬಿಟ್ಟುಕೊಟ್ಟು ದೇವಸ್ಥಾನದಲ್ಲಿ ನಡೆಯುವ ಪೂಜೆಪುನಸ್ಕಾರಗಳಿಗೆಂದು ೨ ಖಂಡುಗ ಗದ್ದೆಗೆ ೨೪ ಗ(ದ್ಯಾಣ)ವನ್ನು ಕಾಣಿಕೆಯಾಗಿ ಸಲ್ಲಿಸಬೇಕೆಂದು ಗದ್ದೆಯನ್ನು ನಮ್ಮಾಳುವರಿಗೆ ಕೊಟ್ಟರು ಎಂಬುದನ್ನು ನೋಡಿದರೆ ಬಹುಶಃ ಈ ಹಣವನ್ನು ದೇವಸ್ಥಾನದಲ್ಲಿನ ನಮ್ಮಾಳ್ವಾರರ ಗುಡಿಯಲ್ಲಿನ ಪೂಜೆಗೆ ಮಾತ್ರ ವಿನಿಯೋಗವಾಗುವ ಹಾಗೆ ವಿಧಿಸಲಾಯಿತೆಂದು ತೋರುತ್ತದೆ.

ಪಾಂಪು ೭೦–೭೧ ಇವೆರಡೂ ಒಂದೇ ಶಾಸನದ ಪ್ರತಿಗಳು. ಇದರ ಕಾಲ ಕ್ರಿ. ಶ. ೧೪೦೨ನೆಯ ನವೆಂಬರ್ ೧೦. ಇಮ್ಮಡಿ ಹರಿಹರರಾಯನ ಆಳಿಕೆಯ ಕಾಲಕ್ಕೆ ಸೇರಿದ ಈ ಶಾಸನದಲ್ಲಿ ಪುರ ಮತ್ತು ಮಾರಮನಹಳ್ಳಿ ಗ್ರಾಮಗಳ ಮಗ್ಗದೆಜೆ, ಮದುವೆದೆಜೆ, ವೊಳವಾರು, ಆಲೆದೆಜೆ ಮುಂತಾದ ಸುಂಕಗಳಿಂದ ಬರುವ ಆದಾಯವನ್ನು ಪುರಗ್ರಾಮದ ವೀರಭದ್ರದೇವರ ಅಂಗಭೋಗಕ್ಕೆ ಲಖಣ್ಣನು ನೀಡಿದನೆಂದು ಹೇಳಿದೆ. ಪಾಂಪು ೭೨ನೆಯ ಶಾಸನದಲ್ಲಿಯೂ ಇದೇ ವಿಷಯವಿದ್ದರೂ, ಇದು ಹಿಂದಿನ ಎರಡು ಶಾಸನಗಳಿಗಿಂತ ಸುಮಾರು ಒಂಭತ್ತು ತಿಂಗಳುಗಳ ಮೊದಲೇ ಹುಟ್ಟಿದೆ. ಬಹುಶಃ ಈ ಶಾಸನದಲ್ಲಿ ಹೇಳಿದ ದಾನವನ್ನೇ ಆ ಇನ್ನೆರಡು ಶಾಸನಗಳಲ್ಲಿ ಪುನರುಚ್ಚರಿಸಲಾಗಿದೆ ಎಂದು ಊಹಿಸಬಹುದು.

ಶ್ರೀಪ ೨೫, ಇಮ್ಮಡಿ ದೇವರಾಯನು ರತ್ನಧೇನು ಮಹಾದಾನವನ್ನು ಮಾಡುವ ಸಂದರ್ಭದಲ್ಲಿ ತೋರಿನಾಡವೇಂಠೆಯದ ಮೇನಾಪುರವಾಗಣಿಯೊಳಗಣ ಚಂದಿಗಾಲಗ್ರಾಮವನ್ನು ವೃತ್ತಿಗಳಾಗಿ ವಿಭಜಿಸಿ ಹಲವಾರು ಬ್ರಾಹ್ಮಣರಿಗೆ ದಾನಮಾಡಿದುದನ್ನು ತಿಳಿಸುವ ತಾಮ್ರಶಾಸನ. ಸಂಸ್ಕೃತ ಭಾಷೆ ನಾಗರೀಲಿಪಿಯ ಈ ಶಾಸನವನ್ನು ಕೊರೆದಾತ ವರದಪಾಚಾರ್ಯ. ದಾನಗ್ರಾಮದ ಮೇರೆಗಳನ್ನು ಮಾತ್ರ ಕನ್ನಡ ಭಾಷೆಯಲ್ಲಿ ಹೇಳಿದೆ. ಚಂದಿಗಾಲಗ್ರಾಮವನ್ನು ಆ ಸಂದರ್ಭದಲ್ಲಿ ಪ್ರತಾಪದೇವರಾಯಪುರವೆಂದು ಹೆಸರಿಸಲಾಯಿತು. ಶಾಸನದ ಕಾಲ ಕ್ರಿ.ಶ. ೧೪೩೦ನೆಯ ಅಕ್ಟೋಬರ್ ೨೮.

೧೪೩೧ನೆಯ ವರ್ಷದ ಶ್ರೀರಂಗಪಟ್ಟಣದ ಶಾಸನದಲ್ಲಿ (ಶ್ರೀಪ ೩) ಅರಸನ ನಿರೂಪದಿಂದ ದೇವರಾಜಒಡೆಯರು ಶ್ರೀರಂಗಪುರದ ಶ್ರೀವೈಷ್ಣವರು ಕೊಡುತ್ತಿದ್ದ ಆಡಿಕೆಸುಂಕ, ಮಗ್ಗ, ವುಮಾರಕಾಣಿಕೆ ಮುಂತಾದ ತೆರಿಗೆಗಳಿಂದ ಬರುತ್ತಿದ್ದ ಆದಾಯ ವನ್ನು ಸೌಮ್ಯರಾಜನೆನಿಸಿದ ಶ್ರೀರಂಗನಾಥದೇವರಿಗೆ ವಸಂತೋತ್ಸವಪೂಜೆಗಾಗಿ ದಾನಮಾಡಿದ ವಿಷಯ ಹೇಳಿದೆ. ಇಲ್ಲಿ ಬರುವ ತೆರಿಗೆಗಳಲ್ಲಿ ವುಮಾರಕಾಣಿಕೆ ಎಂಬ ಪದ ಗಮನಾರ್ಹ. ವುಮಾರ ಎಂಬ ಪದ ಕನ್ನಡದಲ್ಲಿಲ್ಲ. ಆದರೆ ಮೈಸೂರಿನಲ್ಲಿ ಪ್ರಚಲಿತ ವಾಗಿರುವ ತಮಿಳು ಆಡುಮಾತಿನಲ್ಲಿ ವುಮಾರ (ವುಮಾರಪ್ಪಡಿ) ಎಂಬ ಪದವನ್ನು ಹೊಸತಿಲು ಎಂಬ ಅರ್ಥದಲ್ಲಿ ಬಳಸಲಾಗುತ್ತಿದೆ.

ಪ್ರಾಕೃತದಲ್ಲಿ 'ಉಮ್ಮರ', ಪಾಳಿಯಲ್ಲಿ 'ಉಮ್ಮಾರ' ಎಂಬ ಪದಪ್ರಯೋಗವಿದ್ದು ಇದರ ಅರ್ಥ ಹೊಸತಿಲು ಎಂದಾಗುತ್ತದೆ. ಸಂಸ್ಕೃತದಲ್ಲಿ 'ಉಮ್ಮರ' ಎಂಬ ಪದಕ್ಕೆ ಬಾಗಿಲುವಾಡದ ಮೇಲಿನ ಮರಕಟ್ಟು (Upper timber of a door-frame) ಎಂಬ ಅರ್ಥವಿದೆ. 'ವುಮಾರ' ಎಂಬುದು ಈ ಉಮ್ಮರದಿಂದ ಬಂದಿರಬಹುದು. ಆದ್ದರಿಂದ ವುಮಾರಕಾಣಿಕೆ ಎಂಬುದು ಪ್ರಾಕೃತದಿಂದ ಪ್ರಭಾವಿತವಾದ ಪದ. ಇದು ಹೊಸತಿಲುಹಣ ಎಂಬುದಕ್ಕೆ ಸಮನಾದ ಪದವೆನ್ನಬಹುದು. ಇದೇ ಶಾಸನದಲ್ಲಿನ ತಿರುನಾಳು ಎಂಬ ತಮಿಳು ಪದದ ಪ್ರಯೋಗವನ್ನೂ ಈ ಸಂದರ್ಭದಲ್ಲಿ ಗಮನಿಸಬಹುದು.

ಪಾಂಪು ೧೫೨ರಲ್ಲಿಯೂ ಮೇಲ್ಕಂಡ ಶಾಸನದ ದೇವರಾಜಒಡೆಯನೇ ದಾನಿಯಾಗಿ ಕಾಣಿಸಿಕೊಂಡಿದ್ದಾನೆ. ಮೇಲುಕೋಟೆಯ ಸಂಪತ್ಕುಮಾರನಾರಾಯಣದೇವರಿಗೆ ವಸಂತೋತ್ಸವ ತಿರುನಾಳಿನ ಮಧ್ಯಾಹ್ನದ ಅವಸರದ ಸಂಧಿಯಲ್ಲಿ ನಿವೇದನೆ, ನಂದಾದೀವಿಗೆ, ವನಮಾಲೆಗಳಿಗಾಗಿ ಭೂಮಿದಾನವನ್ನು ಮಾಡಿದ ಪ್ರಸ್ತಾಪ ಇದರಲ್ಲಿದೆ. ಶಾಸನಕಲ್ಲಿನ ಕೆಳಭಾಗ ಒಡೆದಿದ್ದು ವಿವರಗಳು ದೊರೆತಿಲ್ಲ. ಶಾಸನದ ಕಾಲ ಕ್ರಿ.ಶ. ೧೪೩೨.

ಪಾಂಪು ೨೧೮ನೆಯ ಹೊಸಹಳ್ಳಿಶಾಸನ ಮಹಾರಾಜಾಧಿರಾಜ, ರಾಜಪರಮೇಶ್ವರ, ಅರಿರಾಯವಿಭಾಡ ಇತ್ಯಾದಿ ಬಿರುದಾಂಕಿತನಾದ ವಿಜಯರಾಯಮಹಾರಾಯನ ಆಳಿಕೆಯ ಕಾಲದ್ದು. ಶಾಸನದ ಕಾಲ ಶಕವರ್ಷ ೧೩೬೮ನೆಯ ಕ್ಷಯ ಸಂವತ್ಸರಕ್ಕೆ ಸಮನಾದ ಕ್ರಿ.ಶ. ೧೪೪೬–೪೭ನೆಯ ವರ್ಷ. ತೇದಿಯ ಇತರ ವಿವರಗಳನ್ನು ಕೊಟ್ಟಿಲ್ಲ. ಇಮ್ಮಡಿ ದೇವರಾಯನು ಕ್ರಿ.ಶ. ೧೪೪೬ನೆಯ ವರ್ಷದ ಮೇ ೨೪ರಂದು ದಿವಂಗತನಾದನೆಂದು ನಮಗೆ ತಿಳಿದಿದೆ.[1] ಪ್ರಸ್ತುತ ಶಾಸನದ ತೇದಿಯ ಇತರ ವಿವರಗಳು ತಿಳಿಯದ ಕಾರಣ ಈ ಶಾಸನ ೧೪೪೬ನೆಯ ವರ್ಷದ ಮೇ ೨೪ಕ್ಕೂ ಮೊದಲೇ ಹುಟ್ಟಿತೆಂದು ಊಹಿಸಲು ಅಸ್ಪದವಿದೆ. ಆದರೆ ಇಮ್ಮಡಿ ದೇವರಾಯನಿಗೆ ವಿಜಯರಾಯನೆಂಬ ಒಬ್ಬ ತಮ್ಮನಿದ್ದು, ಆತನಿಗೆ ಪ್ರತಾಪದೇವರಾಯ ಅಥವಾ ವಿಜಯರಾಯ ಎಂಬ ಹೆಸರಿತ್ತೆಂದೂ ಹೇಳಲಾಗಿದೆ.[2] ಈ ವಿಜಯರಾಯನು ಮಲ್ಲಿಕಾರ್ಜುನನ ಅಗ್ರಜನಾಗಿದ್ದಿರಬಹುದೆಂದೂ ಊಹಿಸಲಾಗಿದೆ. ಮಲ್ಲಿಕಾರ್ಜುನನ ನಂತರ ಆಳತೊಡಗಿದ ವಿರೂಪಾಕ್ಷನು ಈತನ ಮಗ. ಆದಕಾರಣ ಶಾಸನೋಕ್ತ ವಿಜಯರಾಯನು ದೇವರಾಯನ ತಮ್ಮನೋ, ಹಿರಿಯನೋ ಆಗಿರಬಹುದು. ಇಮ್ಮಡಿ ದೇವರಾಯನ ತಂದೆಗೂ ವಿಜಯರಾಯನೆಂಬ ಹೆಸರಿದ್ದಿತು. ಆತನು ವಿಜಯ ಭೂಪತಿ ಎಂದೂ (ಮುಮ್ಮಡಿ) ಬುಕ್ಕನೆಂದೂ ಹೆಸರಿಸಲ್ಪಟ್ಟಿದ್ದಾನೆ. ತಂದೆಯ ಹೆಸರನ್ನೇ ಮಗನಿಗಿಟ್ಟಿರಬಹುದೆಂದು ಊಹಿಸುವುದಾದಲ್ಲಿ ಈ ವಿಜಯರಾಯನು ಇಮ್ಮಡಿದೇವರಾಯನ ಮಗನಾಗಿರಬಹುದು.

೧೪೪೭ನೆಯ ವರ್ಷದ ಡಿಸೆಂಬರ್ ೫ರ ಶ್ರೀಪ ೨೧ನೆಯ ಶಾಸನ ಇಮ್ಮಡಿ ದೇವರಾಯ (ಮಲ್ಲಿಕಾರ್ಜುನ) ದೇವರೋಭಟ್ಟನೆಂಬ ಬ್ರಾಹ್ಮಣನಿಗೆ ಮಾಡಿದ ಗ್ರಾಮದಾನವನ್ನು ತಿಳಿಸುವ, ೩ ತಾಮ್ರದ ಹಲಗೆಗಳ ಮೇಲೆ ನಾಗರೀಲಿಪಿಯಲ್ಲಿ ಕೆತ್ತಲಾದ ಸಂಸ್ಕೃತ ಶಾಸನ. ಇದರಲ್ಲಿ ಅರಸನ ವಂಶಾವಳಿಯನ್ನು ಕೊಡುವಾಗ ದೇವರಾಯ (I)ನ ಮಗನನ್ನು ವಿಜಯರಾಯನೆಂದು ಕರೆದು, ಆತನ ಮಗ ದೇವರಾಯನೆಂದೂ ದೇವರಾಯನ ಮಗ ಮಲ್ಲಿಕಾರ್ಜುನನೆಂದೂ ಹೇಳಿ ಇವನನ್ನು ಶೌರ್ಯಾದಿಗಳಲ್ಲಿ ತಾತ(ತಂದೆ)ನಿಗಿಂತ ಅಧಿಕನೆಂದೂ ಇಮ್ಮಡಿ ದೇವರಾಯನೆಂದೂ ಹೊಗಳುತ್ತಾರೆ ಎಂದು ಹೇಳಿದೆ. ಈ ದೃಷ್ಟಿಯಿಂದ ವಾಸ್ತವವಾಗಿ ಈತ ಮುಮ್ಮಡಿ ದೇವರಾಯನಾಗಬೇಕು.

ಪಾಂಪು ೧೭೬ ಮತ್ತು ಶ್ರೀಪ ೯೩ ಈ ಎರಡೂ ಶಾಸನಗಳ ಕಾಲ ಕ್ರಿ.ಶ. ೧೪೪೮ನೆಯ ವರ್ಷದ ಡಿಸೆಂಬರ್ ೨. ಇಮ್ಮಡಿ ಪ್ರೌಢದೇವರಾಯನಾದ ಮಲ್ಲಿಕಾರ್ಜುನನ ಆಳಿಕೆಯ ಕಾಲದಲ್ಲಿ ತಿಮ್ಮಣ್ಣದಣ್ಣಾಯಕನ ಪತ್ನಿ ರಂಗಾಂಬಿಕೆ ರಂಗಮಠವನ್ನು ಕಟ್ಟಿಸಿ ಅದರಲ್ಲಿ ದಿನಂಪ್ರತಿ ೨೪ ವೈಷ್ಣವರಿಗೆ ಅನ್ನದಾನ ಮಾಡಬಯಸಿದಳು. ಆಗ ಆಕೆಯ ಪತಿ ಅರಸನನ್ನು ಪ್ರಾರ್ಥಿಸಿಕೊಂಡುದರ ಫಲವಾಗಿ ಅರಸನು ತಿಮ್ಮಣ್ಣದಣ್ಣಾಯಕನಿಗೆ ಕುರುವಂಕನಾಡವೆಂತೆಯದ ಮೇಲುಗೋಟೆಗ್ರಾಮಕ್ಕೆ ಸೇರಿದ ಬಾಲೇನಹಳ್ಳಿ ಮತ್ತು ಯಲವದಹಳ್ಳಿಗಳನ್ನು ದಾನಮಾಡಿದನೆಂದು ಪಾಂಪು ೧೭೬ನೆಯ ಮೇಲುಕೋಟೆಯ ಶಾಸನದಲ್ಲಿ ಹೇಳಿದೆ. ಶ್ರೀಪ ೯೩ನೆಯ ಶಾಸನದಲ್ಲಿ ಇದೇ ದಾನದ ಪ್ರಸ್ತಾಪವಿದೆ. ಇದರಲ್ಲಿ ವರದಪಾಚಾರ್ಯನ ಮಗ ಶ್ರೀಗಿರಿಯು ಶಾಸನವನ್ನು ಬರೆದುದಾಗಿ ಹೇಳಿದೆ. ವಾಸ್ತವಿಕವಾಗಿ ಇದು ಸಹ ಶಿಲಾ ಶಾಸನವೇ. ಬಹುಶಃ ತಿಮ್ಮಣ್ಣದಣ್ಣಾಯಕನಿಗಿತ್ತ ತಾಮ್ರಶಾಸನದ ಪ್ರತಿ ಇದು. ಈ ದಾನದ ಪ್ರಸ್ತಾಪವನ್ನು ಪಾಂಪು ೧೭೬ರಲ್ಲಿ ಮಾಡಲಾಗಿದೆ. ಆ ಮೊದಲೇ ಮೇಲುಕೋಟೆಯ ಚೆಲಪಿಳೆರಾಯ ದೇವರಿಗೆ ದಾನವಾಗಿ ನೀಡಲಾದ ಭೂಮಿಗಳು ಹೊರತುಪಡಿಸಿ ಎರಡೂ ಗ್ರಾಮಗಳ ಇತರ ಭೂಮಿಗಳನ್ನು ದಾನಮಾಡಿದು

[1] ಎ ಕ., ಸಂಪುಟ II (ಪರಿಷ್ಕೃತ 1973), ಪೀಠಿಕೆ ಪು. LX.

[2] K.A.N. Sastri & N. Venkataramanayya: *Further Sources of Vijayanagara History*, Vol. I, p. 66–67; Mohammad Habib and Khali Ahmad Nizami (ed): *A Comprehensive History of India*, Vol. V, pp. 1062–63, note 111.

ದಾಗಿಯೂ ಇವುಗಳಿಂದ ಬಂದ ೮೦ ವರಹಗಳ ಆದಾಯ ಸಾಲದೇ ಹೋದ ಕಾರಣ ೪೦ ವರಹಗಳ ಉತ್ಪನ್ನವಿರುವ ಮತ್ತಷ್ಟು ಭೂಮಿಯನ್ನು ದಣ್ಣಾಯಕನು ೪೦೦ ವರಹಗಳಿಗೆ ಕೊಂಡು, ಈ ಎಲ್ಲ ಭೂಮಿಯನ್ನು ಮೇಲುಕೋಟೆಯ ದೇವಾಲಯದ ಸೇನಬೋವ ರಾಮಾನುಜಜೀಯರ ವಶಕ್ಕೆ ನೀಡಿ, ಆ ಮಠದಲ್ಲಿ ಅನ್ನದಾನವನ್ನು ಮಾಡುವ ಜವಾಬ್ದಾರಿಯನ್ನು ಆತನಿಗೆ ಹೊರಿಸಲಾಯಿತೆಂದೂ ಶಾಸನದಲ್ಲಿ ಹೇಳಿದೆ. ಈ ತಿಮ್ಮಣ್ಣದಣ್ಣಾಯಕನು ನಾಗಮಂಗಲದ ಪ್ರಭುವಾದ ಲೋಹಿತವಂಶದ ಸಿಂಗಣ್ಣನ ಮಗ.

ಪಾಂಪು ೧೫೩ನೆಯ ಶಾಸನದಲ್ಲಿ ಇದೇ ಮಲ್ಲಿಕಾರ್ಜುನನನ್ನು ಪ್ರೌಢದೇವರಾಯನೆಂದು ಕರೆಯಲಾಗಿದೆ. ಶಾಸನದ ಕಾಲ ಕ್ರಿ.ಶ. ೧೪೬೦–೬೧. ಶಾಸನದ ಕಲ್ಲು ಒಡೆದಿದ್ದು ವಿವರಗಳು ಹಾಳಾಗಿವೆ.

ಪಾಂಪು ೧೯ ಮತ್ತು ೧೬೩ ವಿರೂಪಾಕ್ಷನ ಎರಡು ಶಾಸನಗಳು. ಮೊದಲನೆಯದು ಸೀತಾಪುರದ ಶಾಸನ. ಇದರ ಕಾಲ ಕ್ರಿ.ಶ. ೧೪೬೭ರ ಆಗಸ್ಟ್ ೨೨. ಇದರಲ್ಲಿ ಇದಕ್ಕೂ ಮೊದಲು ಕ್ರಿ.ಶ. ೧೪೫೫ ಆಗಸ್ಟ್ ೧೪ರಂದು ಮಾಡಲಾದ ದಾನದ ಪ್ರಸ್ತಾಪವಿದೆ. ಶಾಸನದಲ್ಲಿ ಸ್ವಾರಸ್ಯಕರವಾದ ವ್ಯವಹಾರವೊಂದನ್ನು ಹೇಳಲಾಗಿದೆ. ನಾಗಮಂಗಲದ ಸಿಂಗಣ್ಣವೊಡೆಯರ ಮಗ ದೇವರಾಜನು ಕಾವೇರಿನದಿಗೆ ಹೊಸದಾಗಿ ಒಂದು ಕಾಲುವೆಯನ್ನು ತೋಡಿಸಿದಾಗ ಹರಹು ಗ್ರಾಮದ ಮಹಾಜನರು ತಮ್ಮ ಗ್ರಾಮದವರೆಗೂ ಆ ಕಾಲುವೆಯನ್ನು ತೋಡಿಸಿಕೊಡಬೇಕೆಂದು ಬಯಸಿದರು. ಅತ ಇದಕ್ಕೆ ಒಪ್ಪಿ ಕಾಲುವೆಯನ್ನು ತನ್ನ ವೆಚ್ಚದಲ್ಲಿಯೇ ತೋಡಿಸಿಕೊಟ್ಟನೆಂಬುದು ಸ್ಪಷ್ಟ. ಎಂತಲೇ ಈ ಕಾರ್ಯಕ್ಕೆ ಪ್ರತಿಯಾಗಿ ಕುರುವಂಕನಾಡವೇಂಟೆಯದ ಹೊಸಹಳ್ಳಿ ಗ್ರಾಮವನ್ನು ಆ ಗ್ರಾಮದ ಹೆಬಾರುವ ಯದುವಣ್ಣನು ಯಜಮಾನಭಾಗವೆಂದು ಶ್ರೋತ್ರಿಯವಾಗಿ ಕೊಟ್ಟನು. ಬಹುಶಃ ಇದು ನಡೆದದ್ದು ಕ್ರಿ.ಶ. ೧೪೫೫ರಲ್ಲಿ. ಶಾಸನದಲ್ಲಿ ಇದು ಅಷ್ಟು ಸ್ಪಷ್ಟವಾಗಿಲ್ಲ. ಕೆಲಕಾಲಾನಂತರ, ಕ್ರಿ.ಶ. ೧೪೬೭ರಲ್ಲಿ, ಅದೇ ಯದುವಣ್ಣನು ಚಿಕ್ಕಮಳಲಿ, ಹೊಸಹಳ್ಳಿ ಮತ್ತು ಕೆಂದನಹಾಳು ಗ್ರಾಮದ ಅರ್ಧಭಾಗವನ್ನು ೪೦೦ ಹೊನ್ನುಗಳಿಗೆ ಇದೇ ದೇವರಾಜನಿಗೆ ಮಾರಿದನು. ಹೀಗೆ ಕ್ರಯವಾಗಿ ಪಡೆದ ಹೊಸಹಳ್ಳಿ ಗ್ರಾಮವನ್ನು ದೇವರಾಜನು ೨೦೮ ವೃತ್ತಿಗಳಾಗಿ ವಿಭಜಿಸಿ, ಆ ವೃತ್ತಿಗಳಲ್ಲಿ ೮ ವೃತ್ತಿಗಳನ್ನು ಗ್ರಾಮದ ಶ್ರೀರಾಮಚಂದ್ರದೇವರಿಗೂ ಉಳಿದ ೨೦೦ ವೃತ್ತಿಗಳನ್ನು ನಾನಾಗೋತ್ರಸೂತ್ರಗಳ ಬ್ರಾಹ್ಮಣರಿಗೂ ತನ್ನ ತಾಯಿ ಸೀತಾಯಮ್ಮನ ಪುಣ್ಯಾರ್ಥವಾಗಿ ದಾನಮಾಡಿದನೆಂದೂ ಶಾಸನ ತಿಳಿಸುತ್ತದೆ. ಹೊಸಹಳ್ಳಿ ಗ್ರಾಮವನ್ನು ತಾಯಿಯ ಹೆಸರಿನಲ್ಲಿ ಶ್ರೀರಾಮಸೀತಾಪುರ ಎಂದು ಹೆಸರಿಸಲಾಯಿತು. ಕಾಲುವೆ ತೋಡಿಸಿಕೊಟ್ಟಕಾರಣ ಹೊಸಹಳ್ಳಿ ಗ್ರಾಮವನ್ನು ಯಜಮಾನ ಭಾಗವಾಗಿ ಪಡೆದರೂ ಬಹುಶಃ ಆ ಗ್ರಾಮದ ಮೇಲಿನ ಕ್ರಯ, ಭೋಗ್ಯ ಮುಂತಾದ ಹಕ್ಕುಗಳೆಲ್ಲಾ ಹರಹು ಗ್ರಾಮದ ಮಹಾಜನರಿಗೇ ಸೇರಿತ್ತೆಂದೂ ಅನುಭವಿಸುವ ಹಕ್ಕು ಮಾತ್ರ ದೇವರಾಜನದಾಗಿತ್ತೆಂದೂ ಆ ಗ್ರಾಮವನ್ನು ಕ್ರಯವಾಗಿ ಪಡೆದ ನಂತರವೇ ಅದರ ಒಡೆತನ ಆತನಿಗೆ ಲಭಿಸಿತೆಂದೂ ಇದರಿಂದ ಸ್ಪಷ್ಟವಾಗುತ್ತದೆ.

ಪಾಂಪು ೧೬೩ ಸಹ ಒಂದು ದಾನಶಾಸನವೇ. ಅರಸನಾದ ವಿರೂಪಾಕ್ಷನು ಸಣಬಿಮುಕುಳಿಯನಾಡನ್ನು ತಿರುನಾರಾಯಣಪುರ (ಮೇಲುಕೋಟೆ)ದ ನಾಚಿಯಾರಮ್ಮನಿಗೆ ದಾನವಾಗಿ ನೀಡಿದ್ದನು. ಈಕೆ ಆ ಊರಿನ ನಾರಾಯಣದೇವರ, ಲಕ್ಷ್ಮೀದೇವಿಯ ಹಾಗೂ ಶಠಗೋಪಮುನಿಯ ಕೈಂಕರ್ಯದುರಂಧರೆ. ಈಕೆಯು ಮಹಾಪ್ರಧಾನ ತಿಮ್ಮಣ್ಣದಣ್ಣಾಯಕನ ಹಾಗೂ ದೇವಾಲಯದ ಐವತ್ತಿಬ್ಬರ ಅಪೇಕ್ಷೆಯಂತೆ ಆ ನಾಡಿಗೆ ಸೇರಿದ ಕುಳಿಯಕೆಱೆ ಗ್ರಾಮದ ಕಾಲುವಳಿಯಾದ ನಳನಹಳ್ಳಿಯಲ್ಲಿನ ಗೃಹ ಹಾಗೂ ನಿವೇಶನಗಳನ್ನೂ ಪರಾಂಕುಶಸಮುದ್ರವೆಂಬ ಕೆರೆಯ ಕೆಳಗಣ ಭೂಮಿಗಳನ್ನೂ ಕುರುಕುಳವಂಪಾಡಿ ಗ್ರಾಮದ ಗೃಹ ಮತ್ತು ನಿವೇಶನಗಳನ್ನೂ ಕುರುಕುಳವಂಪಾಡಿ ಗ್ರಾಮದ ಆಳ್ವಾರದೇವರ ಕೈಂಕರ್ಯ ಮಾಡಿಕೊಂಡಿದ್ದ ಶ್ರೀವೈಷ್ಣವರಿಗೆ ದಾನವಾಗಿ ನೀಡಿದಳು. ಹೀಗೆ ದಾನವಾಗಿ ಸ್ವೀಕರಿಸಿದುದನ್ನು ಪ್ರತಿಗ್ರಹಿಗಳು ಹನ್ನೆರಡು ವರ್ಷಗಳೊಳಗೆ ವಿಕ್ರಯಮಾಡಬಾರದೆಂಬ ಕರಾರನ್ನು ವಿಧಿಸಲಾಯಿತು. ಮೇಲಿನ ಎರಡೂ ಶಾಸನಗಳ ಭಾಷೆ ಅಷ್ಟು ಸ್ಪಷ್ಟವಾಗಿಲ್ಲ

ಸಂತೇಬಾಚಹಳ್ಳಿಯ ಶಾಸನದಲ್ಲಿ ಗೋಪಾಳದೇವನು ಬಾಚಹಳ್ಳಿಸೀಮೆಯ ಬಿಕಸಮುದ್ರ ಗ್ರಾಮವನ್ನು ಬಾಚಹಳ್ಳಿಯ ವೀರನಾರಾಯಣದೇವರಿಗೆ ನರಸಣ್ಣನಾಯಕನು ಅಸ್ತಮಾನವಾದಾಗ ಅವನಿಗೆ ಧರ್ಮವಾಗಲೆಂದು ದಾನ ಮಾಡಿದುದಾಗಿ ಹೇಳಿದೆ (ಕೃಪೇ ೬೩). ಈ ಶಾಸನದ ಕಾಲ ಶಕಸಂವತ್ಸರ ೧೪೨೫ನೆಯ ರುಧಿರೋದ್ಗಾರಿಸಂವತ್ಸರದ ಮಾರ್ಗ್ಗಶಿರ ಬಹುಳ ೧೦ಕ್ಕೆ ಸಮನಾದ ಕ್ರಿ. ಶ. ೧೫೦೩ನೆಯ ಡಿಸೆಂಬರ್ ೧೩. ಶಾಸನೋಕ್ತ ನರಸಣ್ಣನಾಯಕನು ತುಳುವ ನರಸನಾಯಕನಾಗಿದ್ದಿರಬಹುದು. ಶಾಸನ ಕಾಲದ ವೇಳೆಗಾಗಲೇ ಈತ ಮರಣಹೊಂದಿದ್ದನೆಂದು ಇದರಿಂದ ತಿಳಿಯುತ್ತದೆ.

ಕೃಪೇ ೬೧ ಒಂದು ತಾಮ್ರಶಾಸನ. ನಾಗರೀಲಿಪಿ ಮತ್ತು ಸಂಸ್ಕೃತ ಭಾಷೆಯಲ್ಲಿರುವ ಮೂರು ಹಲಗೆಗಳ ಈ ಶಾಸನದಲ್ಲಿ ತುಳುವ ನರಸನಾಯಕನ ಮಗ ವೀರನರಸಿಂಹನು ಆಳುತ್ತಿದ್ದಾಗ ಸಪ್ತಸಾಗರಮಹಾದಾನದ ಸಂದರ್ಭದಲ್ಲಿ ಅರಸನು ಅತ್ರಿಗೋತ್ರದ ನಂಜೆಹೆಬಾರುವನಿಗೆ ಸಿಂಧುಘಟ್ಟದಸೀಮೆಯ ಕೈಗೊಂಡಹಳ್ಳಿಗೆ ಪ್ರತಿನಾಮವಾದ ವೀರನರಸಿಂಹಪುರವನ್ನು ದಾನಮಾಡಿದುದಾಗಿ

ಹೇಳಿದೆ. ಶಾಸನದ ಕಾಲ ಶಕವರ್ಷ ೧೩೮೩ನೆಯ ಚಿತ್ರಭಾನುಸಂವತ್ಸರದ ಮಾಘ ಬಹುಳ ೧೪, ಭಾನುವಾರ, ಶ್ರವಣನಕ್ಷತ್ರ. ಆದರೆ ಈ ವಿವರಗಳು ಸರಿಹೊಂದುವುದಿಲ್ಲ. ಕ್ರಿ. ಶ. ೧೪೬೨ನೆಯ ಜನವರಿ ೨೯ ಅಥವಾ ಕ್ರಿ. ಶ. ೧೪೬೩ನೆಯ ಫೆಬ್ರವರಿ ೧೭ಕ್ಕೆ ಮೇಲಿನ ವಿವರಗಳನ್ನು ಸರಿಹೊಂದಿಸಬಹುದಾದರೂ ಈ ವರ್ಷದಲ್ಲಿ ತುಳುವ ವೀರನರಸಿಂಹನು ಆಳುತ್ತಲೇ ಇರಲಿಲ್ಲ ಎಂಬುದು ಗಮನಾರ್ಹ. ಆತನು ಸುಮಾರು ಕ್ರಿ. ಶ. ೧೫೦೫ರಿಂದ ೧೫೦೯ರ ವರೆಗೆ ಆಳಿದನು. ಆದ್ದರಿಂದ ಶಾಸನ ಆತನ ಆಳಿಕೆಯ ಸುಮಾರು ೪೨–೪೩ ವರ್ಷಗಳಿಗೂ ಹಿಂದೆಯೇ ಹುಟ್ಟಿದೆ ಎಂದಾಗುತ್ತದೆ. ದಾನ ನೀಡಿದ ಉಲ್ಲೇಖ ಬರುವ ಮೊದಲು ಒಮ್ಮೆಲೇ ಸ್ಕಂದನ ಭ್ರಾತೃವಾದ ಗಜಾನನನ ಶ್ಲೋಕ (ಸಾಲುಗಳು ೪೪–೪೬) ಕಾಣಿಸಿಕೊಂಡಿರುವುದು ಇದರಲ್ಲಿನ ವೈಶಿಷ್ಟ್ಯ. ಇದನ್ನು ಹೊರತುಪಡಿಸಿದರೆ ಶಾಸನ ಕೂಟವಾದುದೆನ್ನಲು ಬೇರಾವ ಆಧಾರಗಳೂ ಇಲ್ಲ. ಬಹುಶಃ ಶಾಸನದಲ್ಲಿ ಕಾಲವನ್ನು ತಪ್ಪಾಗಿ ಉಲ್ಲೇಖಿಸಲಾಗಿದೆ ಎಂದಷ್ಟೆ ನಾವು ಈಗ ಊಹಿಸಬಹುದು.

ಪಾಂಪು ೧೩೪, ೧೩೫ ಮತ್ತು ೧೩೭ ಮೇಲುಕೋಟೆಯಲ್ಲಿರುವ ಕೃಷ್ಣದೇವರಾಯನ ಶಾಸನಗಳು. ೧೩೪ನೆಯ ಶಾಸನನದ ಕಾಲ ಕ್ರಿ. ಶ. ೧೫೨೮. ದಂಡು ಆಉಭಳದೇವರ ಮಗನಾದ ಕೃಷ್ಣರಾಯನಾಯಕನು ಅರಸನು ನಾಯಕತನಕ್ಕೆ ಪಾಲಿಸಿದ್ದ ಶ್ರೀರಂಗಪಟ್ಟಣ–ಸಿಂದಗಟ್ಟ ಸೀಮೆಯೊಳಗೆ ಎರಡು ಗ್ರಾಮಗಳನ್ನೂ ಸಂತೆಯ ಆಯ, ತಳವಾಜಿಕೆ, ಹೊಗೆದೆಱೆ ಮುಂತಾದವುಗಳಿಂದ ಬರುವ ಆದಾಯಭಾಗವನ್ನು, ಒಟ್ಟು ೨೫೪ ವರಹಗಳನ್ನು, ದೇವರಿಗೆ ದಾನಮಾಡಿದುದಾಗಿ ಶಾಸನದಲ್ಲಿ ಹೇಳಿದೆ. ಈ ಸಂದರ್ಭದಲ್ಲಿ '' ಹಿಂದಕೆ ದೇವಸ್ಥಾನದ ಸೀಮೆಯುವರನೂ ವೊಕ್ಕೊಳಾರಿ ಹಿಡಿದುಕೊಂಡು ಹೋಗಿ ತೊಂಡನೂರ ಗದ್ದೆನೂ ವುಳಿಸುವ ಸಂಮಂಧ ಆದನೂ ನಾವು ಕುಳವಕಡಿದು ಬಿಟ್ಟೆವು '' ಎಂದು ಹೇಳಿದೆ. ಮೇಲುಕೋಟೆಯ ದೇವಸ್ಥಾನದ ಭೂಮಿಗಳನ್ನು ಉಳುತ್ತಿದ್ದ ಒಕ್ಕಲಿಗರನ್ನೇ ತೊಂಡನೂರಿನಲ್ಲಿ ದೇವಸ್ಥಾನಕ್ಕೆ ಸೇರದೆ ಇರುವ ಭೂಮಿಗಳನ್ನು ಉಳಲು ಬಲವಂತವಾಗಿ (?) ಕರೆದೊಯ್ಯುತ್ತಿದ್ದ ಕಾರಣ ಈಗ ತೊಂಡನೂರಿನ ಆ ಭೂಮಿಗಳನ್ನೂ ದೇವಸ್ಥಾನಕ್ಕೇ ನೀಡಿದುದಾಗಿ ಇದನ್ನು ಅರ್ಥೈಸಬಹುದು. ಇದರಿಂದ ಈ ಎಲ್ಲ ಭೂಮಿಗಳ ಒಡೆತನ ದೇವಸ್ಥಾನಕ್ಕೇ ಸೇರಿದ್ದು ಅವುಗಳನ್ನು ಉಳಲು ಒಕ್ಕಲಿಗರನ್ನು ಸೂಕ್ತವಾಗಿ ನಿಯಮಿಸಿಕೊಳ್ಳುವ ಹೊಣೆ ಸಹ ದೇವಸ್ಥಾನದ್ದೇ. ಆದುದರಿಂದ ಒಕ್ಕಲುಗಳನ್ನು ಬಲವಂತದಿಂದ ಬೇರೆಡೆಗೆ ಕರೆದೊಯ್ಯುವ ಅಭ್ಯಾಸಕ್ಕೆ ಮುಕ್ತಾಯ ಹಾಕಿದಂತಾಯಿತೇನೋ.

ಕೃಪೇ ೯೯ ಸಂಸ್ಕೃತಭಾಷೆ, ನಾಗರೀಲಿಪಿಯಲ್ಲಿರುವ ಕ್ರಿ. ಶ. ೧೫೩೨ನೆಯ ಫೆಬ್ರವರಿ ೪ನೆಯ ದಿನಾಂಕದ ಐದು ಹಲಗೆಗಳ ಮೇಲೆ ಕೆತ್ತಲಾದ ತಾಮ್ರಶಾಸನ. ಸಿಂಧಘಟ್ಟದಸೀಮೆಗೆ ಸೇರಿದ ವೀರನರಸಿಂಹೇಂದ್ರಪುರವಾದ ಬೆಲಕೆರೆ ಗ್ರಾಮವನ್ನು ಶ್ರೀರಂಗಪಟ್ಟಣದ ನಿವಾಸಿಯಾದ ಸುಬ್ರಹ್ಮಣ್ಯನ ಮಗ ಶ್ರೀನಿವಾಸನಿಗೆ ಅರಸನು ದಾನಮಾಡಿದುದನ್ನು ಇದು ಪ್ರಸ್ತಾಪಿಸುತ್ತದೆ. ಇದೊಂದು ಪುನರ್ದತ್ತಿ. ಈ ಗ್ರಾಮವನ್ನು ಹಿಂದೆ ವೀರನರಸಿಂಹರಾಯನು ಸಪ್ತಸಾಗರದಾನ ಮಾಡುವ ಸಂದರ್ಭದಲ್ಲಿ ಶ್ರೀಶೈಲದ ಶಿವನ ಸನ್ನಿಧಿಯಲ್ಲಿ ಸುಬ್ರಹ್ಮಣ್ಯನಿಗೆ ದಾನವಾಗಿತ್ತಿದ್ದುದನ್ನು ಇದರಲ್ಲಿ ಸ್ಮರಿಸಲಾಗಿದೆ. ಈ ಸಂದರ್ಭದಲ್ಲಿ ಒಂದು ಅಂಶವನ್ನು ಇಲ್ಲಿ ಗಮನಿಸಬಹುದು. ಕೃಪೇ ೭೧ನೆಯ ಕೈಗೋನಹಳ್ಳಿ ತಾಮ್ರಶಾಸನದಲ್ಲಿ ವೀರನರಸಿಂಹನು ಆ ಗ್ರಾಮ (ವೀರನರಸಿಂಹಪುರವೆನಿಸಿದ ಕೈಗೊಂಡಪಲ್ಲಿ)ವನ್ನು ಶ್ರೀಶೈಲದ ಶಿವಸನ್ನಿಧಿಯಲ್ಲಿ ಸಪ್ತಸಾಗರದಾನದ ಸಂದರ್ಭದಲ್ಲಿ ನಂಜೆಹೆಬಾರುವನಿಗೆ ದಾನಮಾಡಿದುದರ ಪ್ರಸ್ತಾಪವಿದೆ. ಆದರೆ ಆ ಶಾಸನದಲ್ಲಿ ಕೊಟ್ಟಿರುವ ತೇದಿಯ ವಿವರಗಳು ಸರಿಹೊಂದುವುದಿಲ್ಲವೆಂದು ಈಗಾಗಲೇ ಗಮನಿಸಿದ್ದೇವೆ. ಪ್ರಸ್ತುತ ಶಾಸನದಲ್ಲಿ ಹಿಂದೆ ವೀರನರಸಿಂಹರಾಯನು ಮಾಡಿದ್ದ ಶಾಸನದ ಪ್ರಸ್ತಾಪವಿರುವುದಲ್ಲದೆ, ಆ ದಾನವನ್ನು ವಿಭವಸಂವತ್ಸರದ ವೈಶಾಖ ಶುದ್ಧ ದ್ವಾದಶಿ ದಿನದಂದು ಮಾಡಲಾಯಿತು ಎಂದು ಸಹ ಹೇಳಿದೆ. ಇದಕ್ಕೆ ಸಮನಾದ ಕಾಲ ಕ್ರಿ.ಶ. ೧೫೦೮ನೆಯ ಏಪ್ರಿಲ್ ೧೨. ಬಹುಶಃ ಕೈಗೋನಹಳ್ಳಿ ತಾಮ್ರಶಾಸನದ ಕಾಲವೂ ಇದೇ ಆಗಿದ್ದು ದುರದೃಷ್ಟವಶಾತ್ ಆ ಶಾಸನದಲ್ಲಿ ತೇದಿಯ ವಿವರಗಳನ್ನು ತಪ್ಪಾಗಿ ನೀಡಿದೆ ಎನ್ನಬಹುದು. ಸಪ್ತಸಾಗರ ಮಹಾದಾನದ ಆ ಸಂದರ್ಭದಲ್ಲಿ ಸುಬ್ರಹ್ಮಣ್ಯನಿಗೆ ಬೆಲಕೆರೆ ಗ್ರಾಮವನ್ನೂ ನಂಜೆಹೆಬಾರುವನಿಗೆ ಕೈಗೊಂಡಪಲ್ಲಿ ಗ್ರಾಮವನ್ನೂ ವೀರನರಸಿಂಹನು ದಾನವಾಗಿ ನೀಡಿರಬೇಕು.

ಪಾಂಪು ೧೨೭ ಮತ್ತು ೧೩೮ ಮೇಲುಕೋಟೆಯ ಶಾಸನಗಳು ಅಚ್ಯುತದೇವರಾಯನ ಕಾಲದವು. ಪಾಂಪು ೧೩೮ನೆಯ ಶಾಸನದ ಕಾಲ ಕ್ರಿ. ಶ. ೧೫೩೪ರ ಫೆಬ್ರುವರಿ ೮. ಹರಿಗಿಲ ಅಬ್ಬರಾಜನ ಮಗ ಪೆರಿರಾಜನು ಮೇಲುಕೋಟೆಯ ದೇವಸ್ಥಾನಕ್ಕೆ ಸೇರಿದ ಕದಳಗೆಱೆಗ್ರಾಮದ ಹೊಸಕೆರೆ ಮತ್ತು ಕೃಷ್ಣದೇವವೊಡೆಯರಕೆರೆಗಳು ಖಿಲವಾಗಿರಲಾಗಿ ೧೫೦ ಗದ್ಯಾಣಗಳ ವೆಚ್ಚದಲ್ಲಿ ಅವುಗಳನ್ನು ಜೀರ್ಣೋದ್ಧಾರಮಾಡಿಸಿದನು. ಆದ್ದರಿಂದ ದೇವಸ್ಥಾನದ ಐವತ್ತಿಬ್ಬರು ಅಯ್ಯಗಳು ಆತನ ಹೆಸರಿನಲ್ಲಿ ದೇವರಿಗೆ ನೈವೇದ್ಯಕ್ಕೆ ಏರ್ಪಾಟನ್ನು ಮಾಡಿ ನೈವೇದ್ಯದ ನಾಲ್ಕರಲ್ಲಿ ಒಂದು ಭಾಗವನ್ನು ಪೆರಿರಾಜ ಅಥವಾ ಆತನು ಕಟ್ಟುಮಾಡಿಕೊಟ್ಟ

ಬೇರೆ ಯಾರಿಗಾದರೂ ನೀಡುವುದಾಗಿ ತಿಳಿಸಿ ಶಾಸನ ಹಾಕಿಸಿದರು. ಒಂದು ವೇಳೆ ಆ ಕೆರೆಗಳ ಅನುಭೋಗ ತಪ್ಪಿದರೂ ಈ ಮರ್ಯಾದೆ ತಪ್ಪುವುದಿಲ್ಲ ಎಂದು ಆಶ್ವಾಸನೆಯನ್ನು ಸಹ ನೀಡಿದರು.

ಅದೇ ವರ್ಷದಲ್ಲಿ ಬಹುಶಃ ಅದೇ ಹರಿಗಿಲ ಅಬ್ಬರಾಜನ ಇನ್ನೊಬ್ಬ ಮಗ ತಿರುಮಲರಾಜಯನು ಅಲ್ಲಿನ ಐವತ್ತಿಬ್ಬರಿಗೆ ಗ್ರಾಮವೊಂದನ್ನು ದಾನಮಾಡಿದನೆಂದು ಪಾಂಪು ೧೨೭ರಲ್ಲಿ ಹೇಳಿದೆ. ಇತರ ವಿವರಗಳು ಲಭ್ಯವಾಗಿಲ್ಲ. ಇದೇ ತಿರುಮಲರಾಜನು ನಾಗಮಂಗಲದೊಳಗಣ ಸೆಟಿಪುರ, ಮಾಲನಹಳ್ಳಿ ಹಾಗೂ ಅದಕ್ಕೆ ಸಲುವ ಕಾಲುವಳಿಗಳಾದ ನಿಲೆಮಂಗಲ, ಹೊಳವಳ್ಳಿ, ಕೆರನಾರನಹಳ್ಳಿಗಳನ್ನು ಮೇಲುಕೋಟೆಯ ಚಲಪಿಳೆರಾಯದೇವರಿಗೆ ಮರುವರ್ಷ (ಕ್ರಿ. ಶ. ೧೫೩೫) ದಾನಮಾಡಿದನು (ಪಾಂಪು ೧೨೫). ಈ ಗ್ರಾಮಗಳು ನಾಗಮಂಗಲ (ಸ್ಥಳ?)ಕ್ಕೆ ಸೇರಿದವುಗಳಾಗಿದ್ದು ಪೂರ್ವದಲ್ಲಿ ಅರಸನು ಅದನ್ನು ರಾಮಾಭಟ್ಟಯ್ಯನವರಿಗೆ ಪಾಲಿಸಿದ್ದನೆಂದೂ ತಿರುಮಲರಾಜನು ಈಗ ಅದನ್ನು ರಾಮಾಭಟ್ಟರ ಕೈಯಿಂದ ಬಿಡಿಸಿಕೊಂಡು ತಾನು ತನ್ನ ಧರ್ಮವಾಗಿ ಬಿಟ್ಟುಕೊಟ್ಟನೆಂದೂ ಪ್ರಸ್ತುತ ಶಾಸನದಲ್ಲಿ ಹೇಳಿದೆ. ತಿರುಮಲರಾಜನನ್ನು ಸಿಂಧುಗೋವಿಂದ, ಸಿತಕರಗಂಡ, ಮಣಿನಾಗಪುರವರಾಧೀಶ್ವರನೆಂದೆಲ್ಲಾ ವರ್ಣಿಸಿದೆ. ಈ ಬಿರುದನ್ನು ಬೇಲೂರಿನ ನಾಯಕರು ಧರಿಸಿದ್ದರು. ಆದರೆ ಆ ಪಾಳೆಯಗಾರ ಮನೆತನದ ಮೂಲಪುರುಷ ಕೃಷ್ಣಪ್ಪನಾಯಕ. ಅವರೆಲ್ಲಾ 'ನಾಯಕ' ಎಂಬ ಉಪನಾಮವನ್ನೂ ಧರಿಸಿದ್ದರು. ಅದನ್ನು ಗಮನಿಸಿದರೆ ಈ ತಿರುಮಲರಾಜ ಬಹುಶಃ ಆ ಮನೆತನಕ್ಕೆ ಸೇರಿರಲಾರ ಎನಿಸುತ್ತದೆ.

ಮಯಿಲನಹಳ್ಳಿಯ (ಕೃಪೇ ೯೩) ಶಾಸನದಲ್ಲಿ ಆ ಗ್ರಾಮವನ್ನು ಮೇಲುಕೋಟೆಯ ಚೆಲ್ವಪಿಳ್ಳೆರಾಯದೇವರಿಗೆ ಅಬ್ಬಗಂಜೂರಿನ ನಂಜರಾಜನು ದಾನಮಾಡಿದನೆಂದು ಹೇಳಿದೆ. ಶಾಸನದ ಕಾಲ ಜಯಸಂವತ್ಸರದ ವೈಶಾಖ ಬಹುಳ ೧೨. ಶಾಸನದಲ್ಲಿ ಅರಸನ ಹೆಸರಿಲ್ಲ. ಆದರೆ ರಾಮಾಭಟ್ಟನ ಪ್ರಸ್ತಾಪವಿದೆ. ದಾನವನ್ನು ಅರಸನ ಅಪ್ಪಣೆ ಪಡೆದು ಮಾಡಿದುದಾಗಿ ಹೇಳಿದೆ. ರಾಮಾಭಟ್ಟನು ಅಚ್ಯುತರಾಯನ ಅಧಿಕಾರಿಗಳಲ್ಲಿ ಪ್ರಮುಖನಾದವನು. ಆದುದರಿಂದ ಶಾಸನ ಅಚ್ಯುತರಾಯನ ಕಾಲಕ್ಕೆ ಸೇರಿದುದೆಂದು ಊಹಿಸಬಹುದು. ಇದೂ ಪಾಂಪು ೧೨೭ನೆಯ ಶಾಸನವೂ ಜಯಸಂವತ್ಸರದಲ್ಲಿ ಹುಟ್ಟಿದವುಗಳೇ. ಎಂತಲೇ ಪ್ರಸ್ತುತ ಶಾಸನ ಸಹ ಕ್ರಿ. ಶ. ೧೫೩೪ರಲ್ಲಿ ಹುಟ್ಟಿತೆಂದು ಊಹಿಸಬಹುದು.

ಶ್ರೀರಂಗಪಟ್ಟಣದ ಶಾಸನ (ಶ್ರೀಪ ೫)ದಲ್ಲಿ ಅಚ್ಯುತರಾಯನ ಆಳಿಕೆಯ ಉಲ್ಲೇಖವಿದೆ. ಆದರೆ ಶಾಸನದಲ್ಲಿ ಕೊಟ್ಟಿರುವ ತೇದಿಯ ವಿವರಗಳು ತಪ್ಪಾಗಿವೆ. ಶಾಸನದ ಕಾಲ ಶಕವರ್ಷ ೧೪೬೪ನೆಯ ರಕ್ತಾಕ್ಷಿ ಸಂವತ್ಸರದ ಆಷಾಢ ಶುದ್ಧ ೧೨ ಎಂದಿದೆ. ರಕ್ತಾಕ್ಷಿಸಂವತ್ಸರಕ್ಕೆ ಸಮನಾದ ಶಕ ಸಂವತ್ಸರ ೧೪೮೬. ಆ ವೇಳೆಗೆ (ಕ್ರಿ. ಶ. ೧೫೬೪) ಅಚ್ಯುತರಾಯನು ದಿವಂಗತನಾಗಿದ್ದನು. ಶಾಸನೋಕ್ತ ಶಕವರ್ಷಕ್ಕೆ ಸಮನಾದ ಕ್ರಿ.ಶ. ೧೫೪೨ ಅಚ್ಯುತರಾಯನ ಆಳಿಕೆಯ ಕೊನೆಯ ವರ್ಷವಾಗುತ್ತದೆ. ಅದು ಶುಭಕೃತ್‌ಸಂವತ್ಸರವಾಗಿತ್ತು. ಶಾಸನ ಬಹುಶಃ ಆ ವರ್ಷದಲ್ಲಿ ಹುಟ್ಟಿರಬಹುದು. ಶಾಸನದಲ್ಲಿ ಕುತೂಹಲಕರವಾದ ಅಂಶವೊಂದನ್ನು ಪ್ರಸ್ತಾಪಿಸಲಾಗಿದೆ. ಶ್ರೀರಂಗಪಟ್ಟಣದಸೀಮೆಯನ್ನು ಅಮರವಾಗಣಿಯಾಗಿ ರಾಮಾಭಟ್ಟಯ್ಯನಿಂದ ಅಪ್ಪಾಜಿಯ ಮಗನಾದ ಪೆದ್ದಿರಾಜನು ಪಡೆದಿರುತ್ತಾನೆ. ಈ ಸೀಮೆಯ ದಳವಾಯಿಅಗ್ರಹಾರಗಳು, ಮಾನ್ಯಗ್ರಾಮಗಳು, ಕರಗ್ರಾಮಗಳಲ್ಲಿದ್ದ ಮಾನ್ಯಗಳು ಹಾಗೂ ಸತ್ರ, ದೇವಸ್ಥಾನಗಳಿಂದ ಸುಂಕವನ್ನು ಪಾರುಪತ್ಯಮಾಡುತ್ತಿದ್ದ ಕಾಮಪ್ಪನಾಯಕನು ವಸೂಲು ಮಾಡಿರುತ್ತಾನೆ. ಹೀಗೆ ವಸೂಲು ಮಾಡಿದ ಒಟ್ಟು ಹಣ ೩೦೦ ಗದ್ಯಾಣಗಳು. ಆದರೆ ಇದು ಈ ಪೂರ್ವದಲ್ಲಿ ಇರಲಿಲ್ಲ. ಆದ್ದರಿಂದ ಅನುಚಿತವಾಗಿ ಬಂದ ಈ ಹಣವನ್ನು ಪೆದ್ದಿರಾಜನು ಶ್ರೀರಂಗಪಟ್ಟಣದ ದೇವರಿಗೆ ರಾಯರಿಗೂ ರಾಮಾಭಟ್ಟಯ್ಯನಿಗೂ ಪುಣ್ಯವಾಗಬೇಕೆಂದು ದಾನಮಾಡಿದನು. ಅಲ್ಲದೆ ಇನ್ನು ಮುಂದೆ ಇಂತಹ ಸುಂಕವನ್ನು ಪ್ರಜೆಗಳು ಕೊಡಬಾರದೆಂದೂ ಮೊದಲಿದ್ದಂತೆ ಅಡಕೆಯನ್ನು ವರ್ತಕ (ಬಣಜಿಗ)ರಿಗೆ ಮಾರಿದ ಮಹಾಜನರು ೩ ಹಣವನ್ನು ವೊಳವಾರುಸುಂಕವಾಗಿ ಕೊಡುವುದನ್ನು ಹೊರತುಪಡಿಸಿ ಬೇರಾವ ಸುಂಕವನ್ನೂ ನೀಡಬಾರದೆಂದೂ ನಿರೂಪ ನೀಡಿದನೆಂದು ಶಾಸನ ತಿಳಿಸುತ್ತದೆ. ಇದರಿಂದ ಅಡಕೆಯ ಸುಂಕವನ್ನು ಮಹಾಜನರು ತೆರುತ್ತಿದ್ದರೆಂದು ತಿಳಿದುಬರುತ್ತದೆ.

ಪಾಂಪು ೧೩೦ ಮತ್ತು ೧೯ ಕ್ರಮವಾಗಿ ಕ್ರಮವಾಗಿ ಕ್ರಿ.ಶ. ೧೫೪೪ ಮತ್ತು ೧೫೪೫ನೆಯ ವರ್ಷಗಳ ಸದಾಶಿವರಾಯನ ಆಳಿಕೆಯ ಕಾಲದ ಶಾಸನಗಳು. ಆರವೀಡು ಮನೆತನಕ್ಕೆ ಸೇರಿದ ನಂದ್ಯಾಲದ ನಾರಸಿಂಗಯದೇವ ಮಹಾಅರಸುವಿನ ಮಗ ಮಹಾಮಂಡಲೇಶ್ವರ ನಾರಯದೇವಮಹಾಅರಸ ಮಾಡಿದ ಧರ್ಮಶಾಸನಗಳಿವು. ಕ್ರಿ. ಶ. ೧೫೪೪ನೆಯ ವರ್ಷದ ಪಾಂಪು ೧೩೦ರಲ್ಲಿ ಭಾಷ್ಯಕಾಜಿರು ಎಂದರೆ ರಾಮಾನುಜಾಚಾರ್ಯರು ಹಿಂದೆ ಬಿಜಯಮಾಡಿದ್ದ ಯತಿರಾಜಮಠದ ಯತಿಗಳಿಗೆ ನಾರಯದೇವನು ದೇಶಾಂತ್ರಿಮುದ್ರೆಯನ್ನು ಉಪಯೋಗಿಸುವ ಹಕ್ಕನ್ನು ನೀಡಿದುದನ್ನು ಹೇಳಿದೆ. ಇದರಿಂದಾಗಿ ದೇವಸ್ಥಾನದ ಆಸ್ತಿಪಾಸ್ತಿಗಳ ಮೇಲೆ ಈ ಯತಿಗಳಿಗೂ ಹಕ್ಕುಂಟಾಯಿತು. ದೇವಸ್ಥಾನಕ್ಕೆ ಪ್ರತಿನಿತ್ಯ ಇಡುವ ಮುದ್ರೆಗೆ ಈ ಯತಿ ತನ್ನ ಮುದ್ರೆಯನ್ನು ಸಹ ಒತ್ತಬೇಕೆಂದು ಸೂಚಿಸಲಾಯಿತು. ದೇವಸ್ಥಾನದ "ಶ್ರೀ ಭಂಡಾರಕೆ ಸಲುವ ರೊಕ್ಕಾದಾಂನ

ತಿರುವಾಭರಣ ವಸ್ತ್ರಭಂಡಾರ ವೊದಲಾದುದಕ್ಕೆ ಹನುಮಂತಮುದ್ರೆ ನಡುವುದಕ್ಕೆ ಕಟ್ಟುಮಾಡಿಬಿಟ್ಟ ನಾಟಿಗೆ ನಿಂಮ ವೊಪ್ಪವನೂ ಯಿಕ್ಕಿ ಶ್ರೀಭಂಡಾರ ವೊದಲಾದ ಸೀಮೆಗ್ರಾಮಗಳಿಗೆ ನಿಂಮ ಸಂವಿತಿಯನು ಯಿಕ್ಕಿ . . . . ಶ್ರೀಭಾಷ್ಯಕಾರಿರ ಸಂನಿಧಿಯಲಿ ಯಿಹ ರಾಮಾನುಜಮುದ್ರೆಗೆ ರಾಜಮುದ್ರೆಸಂಗಡ ನಿಮ್ಮ ಮುದ್ರೆಯನೂ ಯಿಕಿ . . . .'' ಎಂಬಲ್ಲಿ ನಾಲ್ಕುಮುದ್ರೆ—ದೇಶಾಂತ್ರಿ ಮುದ್ರೆ, ಹನುಮಂತಮುದ್ರೆ, ರಾಮಾನುಜಮುದ್ರೆ ಹಾಗೂ ರಾಜಮುದ್ರೆಗಳ ಪ್ರಸ್ತಾಪವಿದೆ ಎನ್ನಬಹುದು. ಶಾಸನದಲ್ಲಿ ಬಳಸಲಾದ ಭಾಷೆ ಸ್ಪಷ್ಟವಾಗಿಲ್ಲವಾದ್ದರಿಂದ ಇದನ್ನು ಅರ್ಥೈಸುವುದು ಕಷ್ಟ.

ಇದೇ ನಾರಯದೇವಮಹಾಅರಸನು ಮರುವರ್ಷ (ಕ್ರಿ.ಶ. ೧೫೪೫) ಬಲ್ಲಾಳಪುರ ಮತ್ತು ವರಾಹನಾಥಕಲಹಳಿ ಎಂಬ ಗ್ರಾಮಗಳನ್ನು ಅವಕ್ಕೆ ಸಲುವ ಕಾಲುವಳಿಗಳ ಸಮೇತವಾಗಿ ದಾನಮಾಡಿದನು. ಈ ಎರಡೂ ಗ್ರಾಮಗಳಿಂದ ಬರಬೇಕಾದ ಆದಾಯ ವಾಸ್ತವಿಕವಾಗಿ ೨೦೦೦ ವರಹಗಳು. ಆದರೆ ಕ್ಷಾಮಕ್ಷೋಭೆಗಳನ್ನು ಗಮನದಲ್ಲಿಟ್ಟುಕೊಂಡು ಅವುಗಳ ಉತ್ಪನ್ನ ೧೨೦೦ ವರಹಗಳೆಂದು ನಿರ್ಧರಿಸಿ ಅದನ್ನು ದೇವರಿಗೆ ಸಲಿಸುವ ಪೂಜೆ, ನೈವೇದ್ಯಗಳ ವೆಚ್ಚಕ್ಕೆಂದು ದತ್ತಿಯಾಗಿ ಬಿಟ್ಟನೆಂದು ಶಾಸನದಲ್ಲಿ ಹೇಳಿದೆ. ಈ ನಾರಯದೇವನು ಶ್ರೀರಂಗಪಟ್ಟಣಸೀಮೆಯನ್ನು ಅರಸನಿಂದ ನಾಯಕತನಕ್ಕೆಂದು ಪಡೆದಿದ್ದನು.

ಮಹಾಮಂಡಲೇಶ್ವರ ತಿಮ್ಮಯದೇವಮಹಾಅರಸನು ನಾರಸಿಂಗದೇವನ ಇನ್ನೊಬ್ಬ ಮಗ. ಹಿಂದೆ ವೀರಣನಾಯಕನು ಬಹುಭಾಷಾಪಂಡಿತನೂ ಜ್ಞಾನಿಯೂ ಆದ ಎಂಬಾರಯನಿಗೆ ನಗುಲನಹಳ್ಳಿ ಎಂಬ ಗ್ರಾಮವನ್ನು ದಾನವಾಗಿ ನೀಡಿದ್ದನು. ಆದರೆ ಕೃಷ್ಣದೇವರಾಯನು ಈ ಪ್ರಾಂತದಮೇಲೆ ದಾಳಿಮಾಡಿದ ಸಂದರ್ಭದಲ್ಲಿ (ಕೃಷ್ಣರಾಯರ ಅವಾಂತರದಲ್ಲಿ) ಈ ದಾನವನ್ನು ಮಾನ್ಯಮಾಡದೆ ಹಿಂದಕ್ಕೆ ಪಡೆಯಲಾಯಿತು. ನಂತರ ಎಂಬಾರಯನ ಮಗ ಅಪ್ಪಯ್ಯಂಗಾರ್ಯನು ಸುವರ್ಣದ ಗರುಡನನ್ನು ದೇವರಿಗೆ ಸಮರ್ಪಿಸಿದ ಸಂದರ್ಭದಲ್ಲಿ ಆ ಗ್ರಾಮದ ಅರ್ಧಭಾಗವನ್ನು ಆತನಿಗೆ ಕೊಡಲಾಯಿತು. ಈಗ (ಕ್ರಿ.ಶ. ೧೫೫೧) ಆ ಅರ್ಧಗ್ರಾಮಕ್ಕೆ ತಿಂಮಯದೇವನು ಇನ್ನರ್ಧವನ್ನು ಸೇರಿಸಿ ದೇವರಿಗೆ ದಾನಮಾಡಿದನು. ಗ್ರಾಮದಿಂದ ಬರುವ ೫೦ ವರಹಗಳ ಉತ್ಪನ್ನದಲ್ಲಿ ಕ್ಷಾಮಡಾಮರಗಳಿಗಾಗಿ ೫ ವರಹಗಳನ್ನು ಕಳೆದು ಉಳಿದ ೪೫ ವರಹಗಳನ್ನು ದೇವಾಲಯ ದತ್ತಿಯಾಗಿ ಪಡೆದು ಅದನ್ನು ಅಲ್ಲಿನ ಪೂಜೆಪುನಸ್ಕಾರಗಳಿಗೆ ಉಪಯೋಗಿಸಬೇಕೆಂದು ಮಾಡಿದ ಧರ್ಮಸಾಧನವನ್ನು ಪಾಂಪು ೧೩೧ರಲ್ಲಿ ವಿವರಿಸ ಲಾಗಿದೆ. ಇಲ್ಲಿ 'ಕೃಷ್ಣರಾಯರ ಅವಾಂತರ' ಎಂಬ ಮಾತು ಗಮನಾರ್ಹ. ಕೃಷ್ಣರಾಯನು ಈ ಪ್ರಾಂತಕ್ಕೆ ದಾಳಿಯಿಟ್ಟದು ಉಮ್ಮತ್ತೂರಿನ ಪಾಳೆಯಗಾರನನ್ನು ಸದೆಬಡಿಯಲು. ಬಹುಶಃ ಆ ದಾಳಿ ತೀವ್ರವಾಗಿದ್ದು ಅಂದಿನ ಸಾಮಾಜಿಕ ಜನಜೀವನ ಸಹ ಅಸ್ತವ್ಯಸ್ತವಾಯಿತು. ಪ್ರಾಂತವನ್ನು ವಶಪಡಿಸಿಕೊಂಡ ಅರಸನೋ ಆತನ ಅಧಿಕಾರಿಗಳೋ ಹಿಂದಿನ ದಾನಮಾನ್ಯ ಗಳನ್ನೆಲ್ಲವನ್ನೂ ಊರ್ಜಿತಗೊಳಿಸಲು ಸಿದ್ಧರಿರಲಿಲ್ಲವೆಂಬುದು ಇದರಿಂದ ತಿಳಿಯುತ್ತದೆ. ಶಾಸನದಲ್ಲಿ ಎಂಬಾರಯನನ್ನು ಶತಭಾಷಾಶತಪತ್ರಸಹಸ್ರಕಿರಣಚತುರ್ಮುಖಪದವಾಕ್ಯಪ್ರಮಾಣಜ್ಞನೆಂದೂ ವೇದಮಾರ್ಗಪ್ರತಿಷ್ಠಾಚಾರ್ಯನೆಂದೂ ವರ್ಣಿಸ ಲಾಗಿದೆ.

ಮಹಾಮಂಡಲೇಶ್ವರ ಅಪ್ರತಿಕಮಲ್ಲ ಮನುಬ್ರೋಲು ಚೆನ್ನದೇವಚೋಡಮಹಾಅರಸನು ಸಿಂದಗಟ್ಟದಸ್ಥಳವನ್ನು ಸದಾಶಿವರಾಯನಿಂದ ಅಮರಮಾಗಣಿಯಾಗಿ ಪಡೆದಿದ್ದನು. ಈತನು ತೆಲುಗುಚೋಳ ಮನೆತನಕ್ಕೆ ಸೇರಿದಾತ. ಮೇಲುಕೋಟೆಯ ದೇವಸ್ಥಾನಕ್ಕೆ ಸಲ್ಲುವ ಈ ಸ್ಥಳದ ಗ್ರಾಮಗಳಲ್ಲಿ ತಳವಾರನನ್ನು ನೇಮಿಸಲೆಂದು ನಿಗದಿಗೊಳಿಸಿದ ಹಣದಲ್ಲಿ ಉಳಿದ ೪೬ ವರಹ ಗಳನ್ನು ದೇವಾಲಯದಲ್ಲಿ ಏಳು ನೈವೇದ್ಯಗಳನ್ನು ಸಮರ್ಪಿಸಲೆಂದು ದೇವಾಲಯಕ್ಕೆ ದಾನಮಾಡಿದನೆಂದು ಪಾಂಪು ೧೩೩ರಲ್ಲಿ ಹೇಳಿದೆ. ಶಾಸನದ ಕೊನೆಯಲ್ಲಿ ೪೬ ವರಹಗಳ ಬದಲು ೨೬ ವರಹಗಳೆಂದು ಬರೆದಿದೆ. ಇದರಲ್ಲಿ ಯಾವುದು ಸರಿ ಎಂದು ಹೇಳಲಾಗದು. ಶಾಸನದ ಕಾಲ ಕ್ರಿ.ಶ. ೧೫೫೦–೫೧.

ಮಹಾಮಂಡಲೇಶ್ವರ ಅಪ್ರತಿಕಮಲ್ಲ ಅವುಬಳದೇವರಾಜಯದೇವಚೋಳಮಹಾಅರಸನ ಕಾರ್ಯಕರ್ತ್ರನಾದ ರಂಗಪಯನು, ಹಾಳಾಗಿದ್ದು ಈಗ ಪುನರ್ವಸತಿಗೊಳಿಸಲ್ಪಟ್ಟದ್ದ, ಕೆಸವಿನಕಟ್ಟೆ ಮತ್ತು ಹಲಸಿನಹಳ್ಳಿ ಗ್ರಾಮಗಳನ್ನು ಬಾಚಯ ಹಳ್ಳಿಯ ವೀರಭದ್ರದೇವರ ಸ್ಥಾನಿಕ ಹೊಂನಹಲಗೆ ಲಿಂಗಣ್ಣನಿಗೆ ಕಾಣಾಚಿಯಾಗಿ ಕೊಟ್ಟನೆಂದು ಸಂತೇಬಾಚಹಳ್ಳಿಯ ಕೃಪೇ ೬೪ನೆಯ ಶಾಸನದಲ್ಲಿ ಹೇಳಿದೆ. ಇದರ ಕಾಲ ಕ್ರಿ.ಶ. ೧೫೫೩. ಅವುಬಳದೇವರಾಜಯಚೋಳಮಹಾಅರಸನು ಸಹ ಅಪ್ರತಿಕ ಮಲ್ಲನೆಂಬ ಬಿರುದನ್ನು ಪಡೆದಿರುವುದನ್ನು ಗಮನಿಸಿದರೆ ಈತನೂ ಮೇಲೆ ಗಮನಿಸಿದ ಚೆನ್ನದೇವಚೋಡಮಹಾಅರಸನೂ ಬಹುಶಃ ಒಂದೇ ಮನೆತನಕ್ಕೆ ಸೇರಿದವರೆಂದು ಊಹಿಸಬಹುದು.

ಆರವೀಡು ಮನೆತನಕ್ಕೆ ಸೇರಿದ ಇನ್ನೊಂದು ಶಾಖೆಯ ಹಿರಿಕೊಂಡ (ಪೆದ್ದಕೊಂಡ) ರಾಜನ ಮೊಮ್ಮಗ, ಕೋನೇಟಿ ರಾಜನ ಮಗ ಕೊಂಡರಾಜಯ್ಯದೇವನು ಪಾಂಪು ೧೨೮ನೆಯ ಕ್ರಿ.ಶ. ೧೫೬೪ರ ಶಾಸನದಲ್ಲಿ ಕಾಣಿಸಿಕೊಂಡಿದ್ದಾನೆ. ಸಿವೆಲ್‌ರವರು

ಕ್ರಿ.ಶ. ೧೫೬೨ರಲ್ಲಿ ಈತನ ಪ್ರಸ್ತಾಪ ಬಂದಿದೆ ಎಂದಿದ್ದಾರೆ.[1] ಈ ಶಾಸನ ಇನ್ನೂ ಎಂಟು ವರ್ಷಗಳ ನಂತರದ್ದು. ಇದೂ ಒಂದು ದಾನ ಶಾಸನವೇ.

ಪಾಂಪು ೧೩೨ನೆಯ ಶಾಸನದ ಕಾಲ ಶಕವರ್ಷ ೧೪೯೨ನೆಯ ಪ್ರಮೋದೂತಸಂವತ್ಸರದ ಚೈತ್ರ ಶುದ್ಧ ೨ಕ್ಕೆ ಸಮನಾದ ಕ್ರಿ.ಶ. ೧೫೭೦ನೆಯ ಮಾರ್ಚ್ ೮; ಶಾಸನದಲ್ಲಿ ಸದಾಶಿವದೇವಮಹಾರಾಯನು ಆಳುತ್ತಿದ್ದಂತೆ ಹೇಳಿದೆ. ಆದರೆ ಈ ವೇಳೆಗೆ ತಾಳೀಕೋಟೆ ಕದನ ಮುಗಿದಿದ್ದು ಸದಾಶಿವರಾಯನು ಪೆನುಗೊಂಡೆಗೆ ಓಡಿಹೋಗಿ ಅಲ್ಲಿ ಆರವೀಡು ಶ್ರೀರಂಗ ಮತ್ತು ತಿರುಮಲರ ಅಧೀನದಲ್ಲಿದ್ದನು. ಆದರೂ ಶಾಸನದಲ್ಲಿ ಈತನನ್ನೇ ಹೆಸರಿಸಿರುವುದು ಗಮನಾರ್ಹ. ಸದಾಶಿವನು ಆತನಕ ಬದುಕಿದ್ದನೆಂದು ಊಹಿಸಬಹುದು. ಶಾಸನದಲ್ಲಿ ಪ್ರಸ್ತಾಪಿಸಿರುವ ವಿಷಯ ಸ್ವಾರಸ್ಯವಾಗಿದೆ. ಹಿಂದೆ ವೆಲುಗೋಡು ಮನೆತನದ ವಸಂತರಾಯನು ಮೈಲನಹಳ್ಳಿ ಮತ್ತು ಇನ್ನೊಂದು ಗ್ರಾಮವನ್ನು ದೇವಾಲಯದ ಶ್ರೀಭಂಡಾರದಿಂದ ಕ್ರಯಕ್ಕೆ ಪಡೆದು ಅದರಿಂದ ಬಂದ ಉತ್ಪನ್ನವನ್ನು ದೇವರಿಗೆ ದಾನವಾಗಿ ನೀಡಿದುದಲ್ಲದೆ ಆ ಧರ್ಮ ಸರಿಯಾಗಿ ನಡೆಯಲೆಂದು ಅನಂತಯ್ಯನೆಂಬ ಒಬ್ಬ ಧರ್ಮಕರ್ತನನ್ನು ಸಹ ನೇಮಿಸಿದನು. ಆದರೆ ಕೆಲಕಾಲಾನಂತರ ಆ ಧರ್ಮವು ಲುಪ್ತವಾದ ಕಾರಣ ವೆಲುಗೋಡ ಚಿತ್ರಕೊಂಡಮನಾಯಕನ ಮಗ ರಾಯಪನಾಯಕನು ಜಿಲೆಳ ರಂಗಪತಿರಾಜಯ್ಯನವರಿಗೆ ಹೇಳಿ ಪೂರ್ವದ ದಾನವನ್ನು ನವೀಕರಿಸಿದನು. ಈ ಬಾರಿ ಅನಂತಯ್ಯನ ಮೊಮ್ಮಗನಾದ ಆಳ್ವಾರು ಸಿಂಗಯ್ಯನು ಧರ್ಮಕರ್ತೃನಾಗಿ ನಿಯಮಿಸಲ್ಪಟ್ಟನು.

೧೬ನೆಯ ಶತಮಾನದ ಶ್ರೀಪ ೬ನೆಯ ಶಾಸನದಲ್ಲಿ ಕೊಟ್ಟಿರುವ ತೇದಿಯ ವಿವರಗಳು (ಪ್ರಜೋತ್ಪತ್ತಿಸಂವತ್ಸರ, ಕಾರ್ತೀಕ ಶು ೧) ತಾಳೆನೋಡಲು ಸಾಲದಾದರೂ ಅಂದಿನ ತಿಥಿಯು ಕ್ರಿ.ಶ. ೧೫೭೧ನೆಯ ವರ್ಷಕ್ಕೆ ಸರಿಹೊಂದುತ್ತದೆ. ಶಾಸನದಲ್ಲಿ ತಿರುಮಲದೇವ ಮಹಾರಾಯನ ಮಗ ರಾಮರಾಜರಸನು ಗ್ರಾಮವೊಂದನ್ನು ಕಾಣಾಚಿಯಾಗಿ ದಾನಮಾಡಿದುದರ ಪ್ರಸ್ತಾಪವಿದೆ. ಶಾಸನಕಾಲದಂದು ಅಳಿಯರಾಮರಾಯನ ಸೋದರ ತಿರುಮಲನು ಆಳುತ್ತಿದ್ದರೂ ಆತನ ಮಗ ರಾಮ (ರಾಮರಾಜ)ನು ಮೈಸೂರಿನ ಸುತ್ತಲಿನ ಪ್ರದೇಶದ ಅಧಿಕಾರಿಯಾಗಿದ್ದನೆಂಬುದು ಇತರ ಆಧಾರಗಳಿಂದ ತಿಳಿದಿದೆಯಾಗಿ ಶಾಸನೋಕ್ತ ರಾಮರಾಜ ಈ ರಾಮನೇ ಆಗಿರಬಹುದು.

ಮೇಲುಕೋಟೆಯ ಇನ್ನೊಂದು ಶಾಸನ (ಪಾಂಪು ೧೩೬)ದಲ್ಲಿ ಶ್ರೀರಂಗರಾಯ(I)ನು ಆಳುತ್ತಿದ್ದಾಗ ಆತನೂ ಕೊಮಾರ ರಾಮರಾಜಮಹಾಅರಸುವೂ ಮೇಲುಕೋಟೆಯ ದೇವಾಲಯದಲ್ಲಿ ಯತಿರಾಜಸಪ್ತತಿಯನ್ನು ಪಠಿಸಲು ಸೂಕ್ತ ಏರ್ಪಾಡನ್ನು ಮಾಡಿದರೆಂದು ಶಾಸನ ಹೇಳುತ್ತದೆ. ಇಲ್ಲಿ ಉಕ್ತನಾದ ರಾಮರಾಜಮಹಾಅರಸುವು ಮೇಲ್ಕಂಡ ಶಾಸನದ ರಾಮರಾಜರಸನೇ ಆಗಿರಬೇಕು. ಈತನು ಶ್ರೀರಂಗನ ಸೋದರನಾಗಿದ್ದನು. ಈ ಶಾಸನದ ಕಾಲ ೧೫೭೪. ಕೊಮಾರ ಎಂಬುದು ಆತನು ಯುವರಾಜನಾಗಿದ್ದನೆಂಬುದನ್ನು ಸೂಚಿಸುತ್ತದೆ. ಈ ರಾಮರಾಜನ ಮಗ, ತಿರುಮಲರಾಜ. ಪಾಂಪು ೨೩೩ನೆಯ ನರಿಹಳ್ಳಿಯ ಮತ್ತು ಪಾಂಪು ೨೩೦ನೆಯ ಮೇನಾಗರ ಶಾಸನಗಳಲ್ಲಿ ಈತನು ತನ್ನ ತಂದೆ ರಾಮರಾಜಯ್ಯನಿಗೆ ಪುಣ್ಯವಾಗಬೇಕೆಂದು ಶ್ರೀರಂಗಧಾಮ ಸ್ವಾಮಿಗೆ (ಶ್ರೀರಂಗಪಟ್ಟಣದ ರಂಗನಾಥನಿಗೆ) ನಾಲ್ಕು ಗ್ರಾಮಗಳನ್ನು ದಾನಮಾಡಿದ ಪ್ರಸ್ತಾಪವಿದೆ. ಮೊದಲನೆಯ ಶಾಸನದ ಕಾಲ ಕ್ರಿ.ಶ. ೧೫೮೫ನೆಯ ಮಾರ್ಚ್ ೨೨. ಎರಡನೆಯದು ಒಂದು ವರ್ಷ ಹಿಂದಿನದು. ಅದರ ಕಾಲ ಕ್ರಿ.ಶ. ೧೫೮೪ನೆಯ ಮಾರ್ಚ್ ೩. ಆದ್ದರಿಂದ ಎರಡನೆಯ ಶಾಸನದ ಕಾಲವಾದ ಕ್ರಿ.ಶ. ೧೫೮೪ನೆಯ ವರ್ಷಕ್ಕೆ ಮೊದಲೇ ರಾಮರಾಜನು ತೀರಿಕೊಂಡು ಆತನ ಮಗ ತಿರುಮಲರಾಜನು ಅಧಿಕಾರಕ್ಕೆ ಬಂದಿರಬೇಕು. ಎರಡೂ ಶಾಸನಗಳಲ್ಲಿ ಅರಸನ ಉಲ್ಲೇಖವಿಲ್ಲದಿದ್ದರೂ ಆಳುತ್ತಿದ್ದ ಅರಸ ಶ್ರೀರಂಗರಾಯನೇ. ಆದುದರಿಂದ ರಾಮರಾಜ ತಿರುಮಲರಾಜನು ಆತನ ಅಧಿಕಾರಿಯಾಗಿದ್ದನೆಂಬುದು ಹಳೇಬೀಡಿನ ಶಾಸನ (ಪಾಂಪು ೨೩೪)ದಿಂದ ಸ್ಪಷ್ಟವಾಗುತ್ತದೆ.

ಇದೇ ಅರಸನ ಮೇಲುಕೋಟೆಯ ಕ್ರಿ.ಶ. ೧೫೮೫ನೆಯ ವರ್ಷದ ಎರಡು ಶಾಸನಗಳಲ್ಲಿ (ಪಾಂಪು ೧೪೯, ೧೫೦)ಯೂ ಉಭಯವೇದಾಂತಾಚಾರ್ಯನೆನಿಸಿದ ಪೆರಿಯಮಲನಂಬಿಯ ಮಗ(?) ಏಟೂರು ತಾತಾಚಾರ್ಯ್ಯನಿಗೆ ನೀಡಲಾದ ಕೆಲವು ಹಕ್ಕುಗಳನ್ನು ಹೇಳಿದೆ. ಮೊದಲನೆಯ ಶಾಸನ ಸಂಸ್ಕೃತ ಭಾಷೆಯಲ್ಲಿದ್ದು ಶಿಥಿಲವಾಗಿರುವುದರಿಂದ ಕೆಲವು ವಿವರಗಳು ಹಾಳಾಗಿವೆ. ಶ್ರೀಭಾಷ್ಯ, ಕೈ(ಕೌ)ಶಿಕಪುರಾಣ, ಶಠಾರಿಸೂಕ್ತ ಮುಂತಾದ ಧರ್ಮಕೃತಿಗಳ ಪಠನಕ್ಕೆ ಮಾಡಿದ ಏರ್ಪಾಡಿಗೆ ಈ ಶಾಸನಗಳು ಸಂಬಂಧಿಸಿವೆ.

ರಾಮರಾಜತಿರುಮಲರಾಜನು ಪಾಂಪು ೪೯ನೆಯ ಕೆಂಚನಹಳ್ಳಿ ಶಾಸನದಲ್ಲಿಯೂ ಕಾಣಿಸಿಕೊಂಡಿದ್ದಾನೆ. ಶಾಸನದ

[1] R. Sewell and S.K. Aiyangar (ed): *Historical Inscriptions of Southern India*, ಪುಟ 403ರಲ್ಲಿನ ವಂಶಾವಳಿ.

ಕಾಲ ಕ್ರಿ.ಶ. ೧೫೯೦. ಈ ವೇಳೆಗೆ ವಿಜಯನಗರದಲ್ಲಿ ವೆಂಕಟಪತಿಯು ಆಳತೊಡಗಿದ್ದರೂ ಶಾಸನದಲ್ಲಿ ಅರಸನ ಪ್ರಸ್ತಾಪವಿಲ್ಲ. ಆದರೆ ಬೆಳಗೊಳದ ಶಾಸನ (ಶ್ರೀಪ ೭೧)ದಲ್ಲಿ ಈ ಅರಸನ ಪ್ರಸ್ತಾಪವಿದ್ದು ಈತನ ಅಣ್ಣ ರಾಮರಾಜಯನ ಮಗ ತಿರುಮಲ ರಾಯನು ಮೈಸೂರಿನ ಒಡೆಯರ ಮನೆತನಕ್ಕೆ ಸೇರಿದ ಚಾಮರಸವೊಡೆಯನ ಮಗ ಬೆಟ್ಟದ ಚಾಮರಸವೊಡೆಯನಿಗೆ ಸತ್ತಿಗನ ಹಳವನ್ನು ಕೊಡಿಗೆಯಾಗಿ ಕೊಟ್ಟನೆಂದೂ ಆ ಗ್ರಾಮವನ್ನೂ ಹಾಗೂ ಮಹಾಜನರಿಂದ ಕ್ರಯವಾಗಿ ಪಡೆದ ಮಜ್ಜಿಗೆಪುರವಾದ ಶಂಕರಪುರ ಗ್ರಾಮವನ್ನೂ ಚಾಮರಸವೊಡೆಯನು ಬೆಳಗೊಳದ ಜನಾರ್ದನ ದೇವಾಲಯದ ರಾಮಾನುಜಕೂಟಕ್ಕೆ ದಾನ ಮಾಡಿದನೆಂದೂ ಹೇಳಿದೆ. ಈ ಶಾಸನದ ಕಾಲ ಕ್ರಿ.ಶ. ೧೫೯೮.

ಶ್ರೀರಂಗಪಟ್ಟಣದ ದೇವಸ್ಥಾನದ ಭಂಡಾರದಲ್ಲಿರುವ ತಾಮ್ರಶಾಸನಗಳಲ್ಲಿ ಒಂದು ಮುಮ್ಮಡಿ ಶ್ರೀರಂಗರಾಜಯ್ಯ ದೇವನದು (ಶ್ರೀಪ ೨೨). ಈ ತೆಲುಗು ಶಾಸನದಲ್ಲಿ ಅರಸನು ಗೋಪಾಲರಾಜಯ್ಯನ ಮಗನೆಂದೂ ರಂಗಪರಾಜಯ್ಯನ ಮೊಮ್ಮಗ ನೆಂದೂ ಹೇಳಿದೆ. ಈ ಶ್ರೀರಂಗರಾಜಯ್ಯನು ವಾಸ್ತವಿಕವಾಗಿ ಗೋಪಾಲನ ದತ್ತು ಮಗ. ಈತನ ತಂದೆ ಚಿನ್ನವೆಂಕಟ. ಅರಸನು ಘನಗಿರಿ(ಪೆನುಗೊಂಡೆ)ಯಲ್ಲಿ ಆಳುತ್ತಿದ್ದನೆಂದಿದೆ. ಕ್ರಿ.ಶ. ೧೬೬೨ನೆಯ ವರ್ಷದ ಈ ಶಾಸನ ಪ್ರಸ್ತುತ ಸಂಪುಟದಲ್ಲಿ ವಿಜಯನಗರದ ಅರಸರ ಕೊನೆಯ ಶಾಸನ.

## ಮೈಸೂರಿನ ಒಡೆಯರು

ಪ್ರಸ್ತುತ ಸಂಪುಟದಲ್ಲಿ ಶ್ರೀಪ ೯೫ ಈ ಮನೆತನದ ಅರಸರ ಪ್ರಾಚೀನ ಶಾಸನ. ಕರಿಘಟ್ಟದ ಈ ಶಾಸನದ ಕಾಲ ನಳ ಸಂವತ್ಸರ, ಮಾಘ ಶುದ್ಧ ೧೦. ಸುಮಾರು ೧೬ನೆಯ ಶತಮಾನದ ಇದರಲ್ಲಿ ದೇವಾಲಯವು (?) ಮಯಿಸೂರ ರಾಜವಡೇರ ಸೇವೆ ಎಂದಿದೆ. ಈ ರಾಜಒಡೆಯನು ಕ್ರಿ.ಶ. ೧೫೭೮ ರಿಂದ ೧೬೧೭ರ ವರೆಗೆ ಆಳಿದ ಅರಸನಾಗಿರಬಹುದು. ಹಾಗಿದ್ದಲ್ಲಿ ಶಾಸನ ದಲ್ಲಿ ಉಕ್ತವಾದ ನಳಸಂವತ್ಸರ ೧೬೧೬–೧೭ನೆಯ ವರ್ಷಕ್ಕೆ ಸರಿಹೊಂದುತ್ತದೆ. ಅದು ಆ ಅರಸನ ಆಳಿಕೆಯ ಕೊನೆಯ ವರ್ಷ.

ಅರಕೆರೆಯ ಶಾಸನ(ಶ್ರೀಪ ೧೧೧)ದ ಕಾಲ ಕ್ರಿ.ಶ. ೧೬೨೫. ಮೈಸೂರು ಚಾಮರಾಜವೊಡೇರ ಮಗ ದೇವರಾಜನು ಮಂಟಪವೊಂದನ್ನು ಕಟ್ಟಿಸಿದನೆಂದು ಶಾಸನದಲ್ಲಿ ಹೇಳಿದೆ. ಸಮಕಾಲೀನ ಅರಸನಾದ ಚಾಮರಾಜವೊಡೆಯ(V)ನಿಗೆ ಮಕ್ಕಳಿಲ್ಲದೆ ರಾಜಒಡೆಯನ ಮಗ ಇಮ್ಮಡಿ ರಾಜಒಡೆಯನು ಆತನ ಉತ್ತರಾಧಿಕಾರಿಯಾದನೆಂದು ತಿಳಿದಿದೆ. ಆದರೆ ವಾಸ್ತವಿಕವಾಗಿ ಈತನಿಗೆ ಮಕ್ಕಳಿದ್ದರೂ ಅವರೆಲ್ಲಾ ಅಲ್ಪ ವಯಸ್ಕರಾಗಿ ಮರಣಹೊಂದಿದರು. ದೇವಚಂದ್ರನ ರಾಜಾವಳೀ ಕಥೆಯಲ್ಲಿ "ಚಾಮರಾಜ ವೊಡೆಯನು ದೇವರಾಜಮ್ ಮೊದಲಾದ ಕುಮಾರರಮ್ ಪಡೆದು" ಎಂದು ಹೇಳಿರುವುದನ್ನು ಗಮನಿಸಿದರೆ ಆ ದೇವರಾಜನೇ ಪ್ರಸ್ತುತ ಶಾಸನದಲ್ಲಿ ಉಲ್ಲೇಖಗೊಂಡ ದೇವರಾಜನೆಂದು ಊಹಿಸಬಹುದಾಗಿದೆ.

ಪಾಂಪು ೨೧೪ ಕಂಠೀರವ ನರಸರಾಜಒಡೆಯನ ತಾಮ್ರಶಾಸನ. ಐದು ಹಲಗೆಗಳ ಮೇಲೆ ನಾಗರೀಲಿಪಿಯಲ್ಲಿ ಕೆತ್ತಲಾದ ಈ ಸಂಸ್ಕೃತ ಶಾಸನದ ಕರ್ತೃ ಕೌಶಿಕವಂಶದ ಶ್ರೀನಿವಾಸನ ಮಗ ನರಸಿಂಹಸೂರಿ. ಸುಕದೊರೆ ಮತ್ತು ಅದಕ್ಕೆ ಸೇರಿದ ಏಳು ಕಾಲುವಳಿಗಳನ್ನು ಒಟ್ಟುಗೂಡಿಸಿ ರಾಜೇಶಕಂಠೀರವನರಸನೃಪಾಂಬೋಧಿಅಗ್ರಹಾರವೆಂದು ಹೆಸರನ್ನಿಟ್ಟು ನಾನಾ ಗೋತ್ರಸೂತ್ರಗಳ ಬ್ರಾಹ್ಮಣರಿಗೆ ದಾನಮಾಡಿದನೆಂದೂ ಒಂದು ವರ್ಷಕ್ಕೆ ಆಗುವಷ್ಟು ಗ್ರಾಸವನ್ನೊಳಗೊಂಡ ಮನೆಗಳನ್ನು ಸಹ ಸಜ್ಜುಗೊಳಿಸಿ ದಾನವಾಗಿ ಕೊಟ್ಟನೆಂದೂ ಶಾಸನದಲ್ಲಿ ಹೇಳಿದೆ. ಶಾಸನದ ಕೊನೆಯಲ್ಲಿ ಶ್ರೀಕಂಠೀರವ ನರಸರಾಜು ಎಂದು ಅರಸನ ಅಂಕಿತವನ್ನು ಕೆತ್ತಲಾಗಿದೆ.

ಶ್ರೀಪ ೨೫ ದೇವರಾಜಒಡೆಯನ ಶಾಸನ. ಈತ ಕಂಠೀರವನರಸರಾಜನ ಚಿಕ್ಕಪ್ಪನಾದ ಮುಪ್ಪಿನ ದೇವರಾಜನ ಮೂರನೆಯ ಮಗ. ಈತನನ್ನು ಕೆಂಪದೇವನೆಂದು ಕರೆಯಲಾಗುತ್ತಿತ್ತು. ಪ್ರಸ್ತುತ ಶಾಸನದಲ್ಲಿ ದಾನಿ ಮಹಿದೇವರಾಜ ಒಡೆಯ. ಈತ ದೇವರಾಜನ ತಮ್ಮ ಮುಪ್ಪಿನ ದೇವರಾಜನ ಕಿರಿಯ ಮಗ. ತನ್ನ ಸೋದರನೊಡನೆ ರಾಜಧಾನಿಯಲ್ಲಿದ್ದ ಈತ ಅಣ್ಣನನ್ನು ಮುದದಿಂದ ಸೇವಿಸುತ್ತಿದ್ದನೆಂದು ಶ್ರೀಪ ೨೪ರಲ್ಲಿ

> ಜಯತಿ ಶುಭಗುಣೈಸ್ಸ್ವೈರದ್ವಿತೀಯಸ್ತೃತೀಯಃ
> ಶ್ರಿತಜನಸುರಭೂಜೋ ದೇವರಾಜಕ್ಷಿತೀಂದ್ರಃ
> ಪರಿಚರತಿ ಮುದಾ ಯಂ ಭವ್ಯಕರ್ಮಾನುಜನ್ಮಾ
> ಸ ಖಲು ಮರಿಯದೇವಕ್ಷ್ಮಾಪತಿಸ್ಸತ್ಯಸಂಧಃ

ಎಂಬ ಶ್ಲೋಕದಲ್ಲಿ ವರ್ಣಿಸಿದೆ. ಈ ರಾಜಕುಮಾರನು ಶ್ರೀರಂಗಪಟ್ಟಣದ ರಂಗನಾಥಸ್ವಾಮಿಗೂ ಮತ್ತು ರಂಗನಾಯಕಿ,

ಶ್ರೀಪಾದದ ಅಮ್ಮ, ಉಭಯನಾಚಿಯರ್ ದೇವಿಗಳಿಗೂ ಪ್ರತಿದಿನ ಮಾಲೆಯ ಸೇವೆಯನ್ನು ನಡೆಸಲು ಶ್ರೀರಂಗದ ಮೊದಲಿಆಂಡಾನ್ ಸಂಬಂಧಿಗಳಾದ ಆರುಜನ ಶ್ರೀವೈಷ್ಣವ ಕುಟುಂಬದವರಿಗೆ ವೀರಾಂಬುಧಿಸ್ಥಳದಲ್ಲಿರುವ ಅಲ್ಲಪ್ಪನಹಳ್ಳಿ ಎಂಬ ಗ್ರಾಮವನ್ನು ಶ್ರೀನಿವಾಸಯ್ಯಂಗಾರ್ಯನಿಂದ ಕ್ರಯವಾಗಿ ಪಡೆದು ದಾನಮಾಡಿದನೆಂದು ಶಾಸನದಲ್ಲಿ ಹೇಳಿದೆ.

ದೇವರಾಜಒಡೆಯನು ಆಳುತ್ತಿದ್ದಾಗ ಶ್ರೀರಂಗಪಟ್ಟಣದ ಅಳಹಶಿಂಗರೈಯ್ಯಂಗಾರ್ಯನು ಮಹಾಭಾರತವಾಚನವನ್ನು ಮಾಡಿದಾಗ ಯುಧಿಷ್ಠಿರಾಭಿಷೇಕ ಪ್ರಸಂಗವನ್ನು ಕೇಳಿದ ಸಂದರ್ಭದಲ್ಲಿ ಆತನಿಗೆ ನರಸೀಪುರದ ಹೋಬಳಿಗೆ ಸೇರಿದ ಮಂದಗೆರೆ ಸ್ಥಳದ ನಾಟನಹಳ್ಳಿ ಮತ್ತು ಬೀರಂಬಳ್ಳಿ ಎಂಬ ಗ್ರಾಮಗಳನ್ನು ದಾನವಾಗಿ ನೀಡಿದನು. ಈ ಪ್ರತಿಗ್ರಹಿಯು ಆ ನಂತರ, ಚಿಕದೇವಮಹಾರಾಜನ ಕಾಲದಲ್ಲಿ (ಕ್ರಿ. ಶ. ೧೬೭೮) ಬೀರಂಬಳ್ಳಿ ಗ್ರಾಮವನ್ನು ಮೇಲುಕೋಟೆಯ ದೇವಸ್ಥಾನದ ಶ್ರೀಭಂಡಾರಕ್ಕೆ ಬಿಟ್ಟುಕೊಟ್ಟು ಅದಕ್ಕೆ ಬದಲಾಗಿ ಈ ಮೊದಲೇ ದೇವಸ್ಥಾನಕ್ಕೆ ಬಿಟ್ಟಿದ್ದ ಕೊತ್ತಾಗಾಲ ಸ್ಥಳದ ಶಿಂಗನಮಾರನ ಹಳ್ಳಿ ಎಂಬ ಗ್ರಾಮವನ್ನು ಪಡೆದುದಾಗಿಯೂ ಬೀರಂಬಳ್ಳಿ ಗ್ರಾಮದ ಉತ್ಪನ್ನವನ್ನು ಆ ದೇವಾಲಯದಲ್ಲಿ ಆಚರಿಸುವ ರಾಮಾನುಜರ ಹುಟ್ಟುಹಬ್ಬದ ಹತ್ತುದಿವಸಗಳ ಸೇವೆಗಾಗಿ ವಿನಿಯೋಗಿಸಲು ದತ್ತಿಬಿಡಲಾಯಿತೆಂದೂ ಪಾಂಪು ೧೪೯ನೆಯ ಶಾಸನದಲ್ಲಿ ಹೇಳಿದೆ. ಇದರಿಂದ ಬಹುಶಃ ಬೀರಂಬಳ್ಳಿ ಗ್ರಾಮದ ಉತ್ಪನ್ನವು ಬದಲಾಗಿ ಪಡೆದ ಗ್ರಾಮದ ಉತ್ಪನ್ನಕಿಂತಲೂ ಹೆಚ್ಚಾಗಿದ್ದು ಈ ಹೆಚ್ಚುವರಿ ಹಣವನ್ನು ಹೀಗೆ ವಿನಿಯೋಗಿಸುವ ಏರ್ಪಾಡು ಮಾಡಲಾಯಿತೆಂದು ಊಹಿಸಬಹುದಾಗಿದೆ.

ಶ್ರೀಪ ೨೪ ಇದೇ ಚಿಕ್ಕದೇವಮಹಾರಾಜಒಡೆಯನ ಕಾಲದ ಶಾಸನ. ಶ್ರೀರಂಗಪಟ್ಟಣದ ರಂಗನಾಥಸ್ವಾಮಿ ದೇವಾಲಯದಲ್ಲಿರುವ ಕೋದಂಡರಾಮ ದೇವಸ್ಥಾನದಲ್ಲಿ ನಡೆಯುವ ಪ್ರತಿದಿನದ ಪೂಜೆ, ಶ್ರೀರಾಮನವಮಿಯ ಉತ್ಸವ ಮುಂತಾದ ಸೇವೆಗಳಿಗಾಗಿ ಬಳಗುಳದಸ್ಥಳದ ಅಮ್ವೇರಹಳ್ಳಿ ಗ್ರಾಮವನ್ನು ಚಿನ್ನಯ್ಯಂಗಾರ್ ಮತ್ತು ಚಿಂತಾಮಣಯ್ಯಂಗಾರ್ ಎಂಬ ಇಬ್ಬರಿಂದ ಕ್ರಯಕ್ಕೆ ಪಡೆದು ದಾನಮಾಡಿದುದರ ಉಲ್ಲೇಖ ಇದರಲ್ಲಿದೆ. ದಾನಿ ದೇವರಾಜಒಡೆಯನ ಚಂಬಿನಊಳಿಗದ ಚಲುವವ್ವೆಯ ಮಗ ದೊಡ್ಡದೇವಯ್ಯ. ದೇವರಾಜಒಡೆಯನನ್ನು ಚಾಮರಾಜಒಡೆಯರ ಪೌತ್ರ, ದೇವರಾಜ ಒಡೆಯರ ಪುತ್ರ ಎಂದು ಹೇಳಿರುವುದರಿಂದ ಈ ದೇವರಾಜಒಡೆಯನು ಮರಿದೇವರಾಜಒಡೆಯನಾಗಿರುವುದು ಸ್ಪಷ್ಟ. ಶಾಸನದ ಕಾಲ ಕ್ರಿ.ಶ. ೧೬೮೬. ಎಂದಮೇಲೆ ಚಿಕ್ಕದೇವರಾಜನ ಆಳಿಕೆಯ ಕಾಲದಲ್ಲೂ ಆತನ ಚಿಕ್ಕಪ್ಪನಾದ ಈ ದೇವರಾಜ ಒಡೆಯನು ಬದುಕಿದ್ದು ದಲ್ಲದೆ ಅರಸನ ಗೌರವಾದರಗಳಿಗೆ ಪಾತ್ರನಾಗಿದ್ದನೆಂಬುದೂ ತಿಳಿದುಬರುತ್ತದೆ.

ಪಾಂಪು ೯೯ ಹದಿನಾರು ತಾಮ್ರಪಟಗಳ ಮೇಲೆ ಕನ್ನಡದಲ್ಲಿ ಕೆತ್ತಲಾದ ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿರುವ ಶಾಸನ. ಶಾಸನದಲ್ಲಿ ೭೩೩ ಸಾಲುಗಳಿವೆ. ಅರಸನಾದ ಇಮ್ಮಡಿ ಕೃಷ್ಣರಾಜನ ವಂಶಾವಳಿಯನ್ನು ಕೊಟ್ಟಿರುವ ಈ ಶಾಸನದ ಕಾಲ ಕ್ರಿ. ಶ. ೧೭೫೨. ಯಾದವಪುರವೆನಿಸಿದ ತೊಂಡನೂರು ಮತ್ತು ಕುರುವಂಕನಾಡಿನಲ್ಲಿನ ಅತ್ತಿಕುಪ್ಪ ಗ್ರಾಮಗಳನ್ನು ಅವುಗಳ ಕಾಲುವಳಿಗಳೊಡನೆ ಅಗ್ರಹಾರಗಳನ್ನಾಗಿ ಪರಿವರ್ತಿಸಿ, ೧೧೨ ವೃತ್ತಿಗಳನ್ನಾಗಿ ವಿಭಜಿಸಿ, ಬ್ರಾಹ್ಮಣರನ್ನು ಅಲ್ಲಿ ನೆಲೆಗೊಳಿಸಿದ ವಿಷಯವನ್ನು ತಿಳಿಸುವುದು ಶಾಸನದ ಉದ್ದಿಶ್ಯ. ಈ ಶಾಸನವನ್ನು ಗ್ರಂಥ (ಶಾಸನಗ್ರಂಥ)ವೆಂದು ಕರೆದಿದ್ದು ಇದರ ಕರ್ತೃ ಕರ್ನಾಟಾಂಧ್ರಸುಸಂಸ್ಕೃತಕವಿತಾಗಾಂಧರ್ವದಲ್ಲಿ ಕುಶಲನಾದ ರಾಮಾಯಣಂ ತಿರುಮಲೆಯಾಚಾರ್ಯ್ಯನೆಂದು ಹೇಳಿದೆ.

ಪಾಂಪು ೨೦೫, ೨೦೬ ಸಹ ಇದೇ ಕವಿಯಿಂದ ವಿರಚಿತವಾದ ತಾಮ್ರಶಾಸನಗಳು. ಕ್ರಿ.ಶ. ೧೭೫೪ರ ಮೊದಲನೆಯ ಶಾಸನದಲ್ಲಿ ಅರಸನು ತನ್ನ ತಂದೆತಾಯಿಗಳು ಕಂಚಿಯ ವರದರಾಜಸ್ವಾಮಿಯ ಸೇವೆಗೆ ಹಿಂದೆ ಮಾಡಿದ್ದ ದಾನಗಳನ್ನು ಊರ್ಜಿತ ಗೊಳಿಸಿದುದಲ್ಲದೆ ಸ್ವತಃ ೫೦೦ ಕಂಠೀರವಗುಳಿಗೆವರಹಗಳನ್ನು, ೧೨ ಗ್ರಾಮಗಳನ್ನು ಸಹ ದಾನವಾಗಿ ನೀಡಿದನೆಂದು ಹೇಳಿದೆ. ಇದನ್ನು ಎಂದಿನಂತೆ ಅಳಗಿಯಮನವಾಳರಾಮಾನುಜಜೀಯರು ನಡೆಸಿಕೊಂಡು ಬರುವ ಏರ್ಪಾಡನ್ನು ಸಹ ಮಾಡಲಾಯಿತು. ಕ್ರಿ.ಶ. ೧೭೫೫ರಲ್ಲಿ ಹೊಗರನಾಡಿನ ನಾಗಮಂಗಲಸ್ಥಳಕ್ಕೆ ಸೇರಿದ ಹುಳ್ಳೇನಹಳ್ಳಿ ಮತ್ತು ಅದಕ್ಕೆ ಸೇರಿದ ನಾಲ್ಕು ಕಾಲುವಳಿಗಳನ್ನು ಸಹ ಅರಸನು ಅಳಹಸಿಂಘ್ಯನ ಮಗ ಸಿಂಗಪೆರುಮಾಳನಿಗೆ ದಾನ ನೀಡಿದ ವಿಷಯ ಮತ್ತೊಂದು ಶಾಸನದಲ್ಲಿದೆ.

ಕೃಪೇ ೧೦೨-೦೪ ಸಹ ಇಮ್ಮಡಿ ಕೃಷ್ಣರಾಜಒಡೆಯನ ಶಾಸನಗಳು. ಅರಸನು ಹೈದರಲ್ಲಿ ಬಹದೂರನಿಗೆ ಚಟ್ಟಂಗೆರೆ ಗ್ರಾಮವನ್ನು ಕೊಟ್ಟನೆಂದು ಹೇಳುವ ಅದೇ ಚಟ್ಟಂಗೆರೆ ಗ್ರಾಮದ ಈ ಶಾಸನಗಳ ಕಾಲ ಕ್ರಿ.ಶ. ೧೭೬೫ರ ಮೇ ೨೩. ಈ ಮೂರು ಶಾಸನಗಳಲ್ಲಿ ಸ್ವಲ್ಪ ಬದಲಾವಣೆಗಳಿವೆ. ತೊಣ್ಣೂರಿನ ನಿಲಾಮಶೂದಖಾದರಿ ದರಗಾದಲ್ಲಿ ನಡೆಸುವ ದರಿದ್ರರ ಧರ್ಮಕ್ಕೆ –ಅಂದರೆ ಅವರ ಆಹಾರದಾನಕ್ಕೆ–ಈ ಗ್ರಾಮವನ್ನು ದಾನಮಾಡಲಾಯಿತೆಂದು ಮೊದಲನೆಯ ಶಾಸನದಲ್ಲಿ ಹೇಳಿದೆ. ಎರಡನೆಯ ಶಾಸನದಲ್ಲಿ ಗ್ರಾಮದ ಹುಟ್ಟುವಳಿಯ ಜೊತೆಗೆ ಅಡಕೆತೋಟದ ಹುಟ್ಟುವಳಿಯನ್ನೂ ದಾನಮಾಡಲಾಯಿತೆಂದಿದೆ. ಆ ತೋಟ ವನ್ನು ಹೈದರಲ್ಲಿಯು ೩೦೦ ವರಹಗಳಿಗೆ ಕೊಂಡು ದಾನಮಾಡಿದನು (ಕೃಪೇ ೧೦೩). ಮೂರನೆಯ ಶಾಸನದಲ್ಲಿ ಫಕೀರರ

ಪ್ರಸ್ತಾಪವೂ ಇದೆ. ಬಹುಶಃ ಅವರಿಗೂ ಇಂತಹ ವ್ಯವಸ್ಥೆಯನ್ನು ಮಾಡಲಾಯಿತು. ಶಾಸನ ಕಾಲದ ವೇಳೆಗಾಗಲೇ ದಳವಾಯಿ ನಂಜರಾಜಯ್ಯನು ಹೈದರನಿಗೆ ನವಾಬ್‌ಹೈದರ್‌ಅಲಿಖಾನ್ ಬಹದೂರ್ ಎಂಬ ಬಿರುದನ್ನಿತ್ತಿದ್ದು, ಆ ಬಿರುದನ್ನೇ ಶಾಸನದಲ್ಲಿ ಉಪಯೋಗಿಸಲಾಗಿದೆ. ತಿರುಚಿನಾಪಳ್ಳಿಯಿಂದ ಹೊರಟ ಹೈದರನು ದಿಂಡಿಗಲ್, ಸೇಲಂ ಮಾರ್ಗವಾಗಿ ಶ್ರೀರಂಗಪಟ್ಟಣವನ್ನು ಆಗಸ್ಟ್ ಮಾಹೆಯ ಅಂತ್ಯದಲ್ಲಿ ತಲುಪಿದನೆಂದು ಹೇಳಿದೆ.[1] ಆದರೆ ಪ್ರಸ್ತುತ ಶಾಸನಗಳನ್ನು ಗಮನಿಸಿದರೆ ಅದಕ್ಕೂ ಮೊದಲೇ ಆತ ಶ್ರೀರಂಗಪಟ್ಟಣವನ್ನು ತಲುಪಿದಂತೆ ತೋರುತ್ತದೆ. ಈ ಗ್ರಾಮಗಳ ಕಂದಾಯದ ಬೆಲೆಯನ್ನು ಹೈದರನು ಭಂಡಾರಕ್ಕೆ ಈ ಮೊದಲೇ ಕೊಟ್ಟದ್ದನೆಂದೂ ಮೈಸೂರಿನ ಆಡಳಿತದ ಮೇಲೆ ಆತನ ಪ್ರಭಾವ ಎಷ್ಟರಮಟ್ಟಿಗಿದ್ದಿತೆಂಬುದನ್ನು ಇವು ಸೂಚಿಸುತ್ತದೆಂದೂ ಶ್ರೀ ಹಯವದನರಾಯರು ಹೇಳಿದ್ದಾರೆ.[2]

ಶ್ರೀರಂಗಪಟ್ಟಣದ ಪಶ್ಚಿಮರಂಗನಾಥಸ್ವಾಮಿಯವರ ಸನ್ನಿಧಿಗೆ ಈಶಾನ್ಯದಲ್ಲಿ ದೇವರ ಸೇವೆಗಾಗಿ ಹಾಗೂ ಇತರರ ಉಪಯೋಗಕ್ಕಾಗಿ ವೇದಪುಷ್ಕರಣಿ ಎಂಬ ಕೊಳವನ್ನು ಅಮರಂಬೋದು (ಬೇಡು) ಗ್ರಾಮದ ನಲ್ಲತಂಬಿಮೊದಲಿಯು ಕ್ರಿ. ಶ. ೧೮೦೦ರಲ್ಲಿ ಕಟ್ಟಿಸಿದನು (ಶ್ರೀಪ ೧೯). ಈತನು ವೇಲಾಯುಧಮೊದಲಿಯಾರನ ಮಗ, ಮುಕ್ಕಪ್ಪಮೊದಲಿಯ ಮೊಮ್ಮಗ. ವೇಲಾಯುಧಮೊದಲಿಯಾರನು ತುಳುವ ವೇಳಾಳಕುಲದವನೆಂದೂ ಶಿವಗೋತ್ರದವನೆಂದೂ ಶ್ರೀಪ ೨೦ರಲ್ಲಿ ಹೇಳಿದೆ. ಈ ಶಾಸನವನ್ನು ಶ್ರೀಪ ೧೯ರ ಕೆಳಗೆ ತಮಿಳು ಲಿಪಿಯಲ್ಲಿ ಬರೆಯಲಾಗಿದೆ.

## ಸಾಮಾಜಿಕ–ಆರ್ಥಿಕ

ಕೃಪೇ ೮೬, ೯೦ ಮತ್ತು ೯೫ ಈ ಮೂರು ಕ್ರಯಶಾಸನಗಳು. ಮೊದಲನೆಯ ಶಾಸನ ಇಮ್ಮಡಿ ವೀರಬಲ್ಲಾಳನ ಆಳಿಕೆಯ ಕಾಲದ ಕ್ರಿ.ಶ. ೧೧೭೪ರಲ್ಲಿ ಹುಟ್ಟಿತು. ಎರಡನೆಯ ಶಾಸನದ ಕಾಲ ಕ್ರಿ.ಶ. ೧೨೯೯. ಮೂರನೆಯದರ ಕಾಲ ಕ್ರಿ.ಶ. ೧೩೦೨. ಮೊದಲನೆಯ ಶಾಸನವನ್ನು ಈಗಾಗಲೇ ಪ್ರಸ್ತಾಪಿಸಲಾಗಿದೆ. ಈ ಶಾಸನದಲ್ಲಿ ಹೇಳಲಾದ ತೆರಿಗೆಗಳಲ್ಲಿ ಅನೇಕ ತೆರಿಗೆಗಳ ಸ್ವರೂಪ ಸ್ಪಷ್ಟವಾಗಿಲ್ಲ. ಸೇಸೆ ಎಂಬುದು ಒಮ್ಮೊಮ್ಮೆ ಧಾನ್ಯರೂಪದಲ್ಲಿ ಪಡೆಯಲಾಗುತ್ತಿದ್ದ ಕಾಣಿಕೆ ಎಂದು ಅರ್ಥೈಸಲಾಗಿದೆ.[3] ಆದರೆ ಕಟಕಸೇಸೆ, ಆನೆಸೇಸೆ ಎಂಬಲ್ಲಿ ಈ ಅರ್ಥ ಹೊಂದುವುದಿಲ್ಲವೆನಿಸುತ್ತದೆ. ಪಟ್ಟಬಂಧ, ಪುತ್ರೋತ್ಸಾಹ ಎಂಬುವು ಅರಸನ (ಅಥವಾ ಮಂಡಲಿಕರ?) ಪಟ್ಟಬಂಧೋತ್ಸವ, ಪುತ್ರೋತ್ಸವಗಳ ಸಂದರ್ಭದಲ್ಲಿ ಸಲ್ಲಿಸಬೇಕಾದ ಕಾಣಿಕೆಯಾಗಿರಬಹುದು.

ಸಿಂಧಘಟ್ಟದ ಮಹಾಜನಗಳು ಸಂಗಮೇಶ್ವರದ ಜನ್ನೇಶ್ವರದ ಸ್ಥಾನವನ್ನೂ ಆ ದೇವರ ಎರಡು ವೃತ್ತಿಗಳನ್ನೂ ರಾಹುಳ ಮಲ್ಲೆಯನಾಯಕನಿಗೆ ೮೫ ವರಹಗಳಿಗೆ ಮಾರಿದಾಗಲೂ ಸಂಗಮೇಶ್ವರದೇವರಿಗೆ ಅಮೃತಪಡಿಗೆ ಇಕ್ಕುವ ಹೊನ್ನನ್ನು ಪ್ರತಿವರ್ಷವೂ ತಾವೇ ಕೊಳ್ಳುತ್ತಿರುವುದರಿಂದ ಅರಮನೆಗೆ ತೆರಬೇಕಾದ ತೆರಿಗೆಗಳನ್ನು ತಾವೇ ತೆರುವುದಾಗಿಯೂ ಊರೊಳಗಣ ಕೋಟೆಗೆ ದೇವದಾನಂಗಳನಿಕ್ಕುವ ಅಭ್ಯಾಗತೆ ಮೊದಲಾದ ಏನು ನಿಬಂಧಹುಟ್ಟಿದರೂ ಮಲೆಯನಾಯಕನೇ ಪಡೆಯಬಹುದೆಂದೂ ಕಟ್ಟುಮಾಡಿಕೊಂಡರು (ಕೃಪೇ ೯೦).

ಕೃಪೇ. ೯೫ರಲ್ಲಿ ಭಯಿರಮೇಶ್ವರಪುರದ ಮಹಾಜನಗಳೂ ಸ್ಥಾನಿಕಬೊಮ್ಮಣ್ಣನೂ ಪ್ರಜೆಗಳೂ ಕೂಡಿಕೊಂಡು ಅನಂತಪ್ಪವೊಡೆಯನಿಗೆ ಕೊಟ್ಟ ಕ್ರಯಪತ್ರದ ವಿವರಗಳಿವೆ. ಗ್ರಾಮದ ಹಿರಿಯಕೆರೆಯ ಕೆಳಗಿನ ಗದ್ದೆ, ನಾಗಣ್ಣಗಳ ದೇವಪ್ಪನ ಮೂರು ಖಂಡುಗ ಗದ್ದೆ, ಬೊಮ್ಮಣನ ಒಂದು ಖಂಡುಗ ಹದಿನೆಂಟು ಕೊಳಗದ ಗದ್ದೆ (ಒಟ್ಟು ೫ ಖಂಡುಗ) ಇವಿಷ್ಟನ್ನೂ ೫೦ ವರಹ ಗದ್ಯಾಣಗಳಿಗೆ ಮಾರಿ ಸೇಸೆ, ಸಿದ್ಧಾಯ ಮುಂತಾದ ತೆರಿಗೆಗಳನ್ನು ತಾವೇ ತೆರುವುದಾಗಿ ಹೇಳಿದೆ. ಇದರಲ್ಲಿ ಹೊಂಬಳಿ, ಮಳಬ್ರಿಯ, ಮಲ್ಲಿಗೆ, ಸೊಲ್ಲಗೆ, ತಿಇರಿಪತ್ರ, ಸಾಲ, ಬೆಡಗೊಳು ಮುಂತಾದವುಗಳನ್ನು ಹೆಸರಿಸಲಾಗಿದೆ. ಗದ್ದೆಯ ಬೆಲೆಯನ್ನು ಹುಲುವೀಸ ಉಳಿಯದೆ ಸಲಿಸಿಕೊಂಡರೆಂದಿದೆ. ಎಂದರೆ ಸಂಪೂರ್ಣ ಬೆಲೆಯನ್ನು ಏನೂ ಬಿಡದೆ ಪಡೆದರೆಂದು ಅರ್ಥವಾಗುತ್ತದೆ. ಅನಂತಪ್ಪನು ಪಡೆದ ಗದ್ದೆಗೆ ಯೋಗಣ್ಣನಕಟ್ಟೆಯಿಂದ ಬರುವ ನೀರು ಸಾಲದಿದ್ದಲ್ಲಿ ಹಿರಿಯಕೆರೆಗೆ ಅರಣೆಯನು ಯಿಕ್ಕಿಕೊಟ್ಟು (ಕಟ್ಟೆಯನ್ನು ಕಟ್ಟಿಸಿ?) ಸರತಿಯಲ್ಲಿ ನೀರನ್ನು ಹರಿಸುವುದಾಗಿ ಮಹಾಜನರು ಕೊಟ್ಟ ಭರವಸೆ ಇದರ ಇನ್ನೊಂದು ವಿಶೇಷ.

ತೊಣಚಿ ಗ್ರಾಮದ ಕ್ರಿ.ಶ. ೧೦೪೮–೪೯ನೆಯ ವರ್ಷದ ಶಾಸನದಲ್ಲಿ ಹದಿನೆಂಟು ವಿಷಯದ ದೇಸಿಗಳು ಮುಂತಾದವರು ಅಂಕಕಾರ ಮತ್ತು ನಗರೇಶ್ವರದೇವರಿಗೆ ಬಿಡತಿ ಇಟ್ಟರಪಾವಾಡಿ, ಬೆಸವಕ್ಕಳ ಬೀರವಣವೃತ್ತಿ, ವಿಚರದ ಇಟ್ಟರ ಹಡುವಾರ, ಮಾಱುಧಾನ್ಯವಿಂಗ ವೀಸ–ಇವುಗಳನ್ನು ಧರ್ಮವಾಗಿ ಬಿಟ್ಟರೆಂದಿದೆ (ಕೃಪೇ ೫೦). ಪಾವಾಡಿ ಎಂಬುದು ಪ್ರಾಭೃತದ ತದ್ಭವ

[1] C. Hayavadana Rao : *History of Mysore*, Vol. II p. 2206.

[2] ಅದೇ, ಪು. 588, ಅಡಿಟಿಪ್ಪಣಿ 20

[3] S. Gururajachar : *Some Aspects of Economic and Social Life in Karnataka*, p. 147.

ರೂಪವಾದ ಪಾವುಡ ಆಗಿದ್ದೀತು. ಈ ಮಾತಿಗೆ an offering, a gift–ದಾನ–ಎಂಬ ಅರ್ಥವಿದೆ. ಬಿಡತಿ ಇಟ್ಟರ ಪಾವಾಡಿ ಎಂದರೆ ಬಿಡದಿ(ಹಂಗಾಮಿ ವಸತಿ)ಯ ಮೇಲಿನ ತೆರಿಗೆ ಎಂದು ಅರ್ಥೈಸಬಹುದೇ? ಆ ತೆರಿಗೆಯನ್ನು–ದಾನವಾಗಿ–ಮಾನ್ಯ ಮಾಡಲಾಯಿತು ಎನ್ನಬಹುದೇ? ವಿಚರದ ಇಟ್ಟರ ಹಡುವಾರ ಎಂದರೇನು? ಬೆಸವಕ್ಕಳು–ಬೆಸಮಕ್ಕಳು–ಎಂದರೆ ಸೇವಕರಿಗೆ ಸಲುವ ಬೀರವಣವೃತ್ತಿಯನ್ನು ದಾನವಾಗಿ (ಮಾನ್ಯ) ಬಿಡಲಾಯಿತು ಎನ್ನಬಹುದು.

ತೊಣ್ಣೂರಿನ ಲಕ್ಷ್ಮೀನಾರಾಯಣ ದೇವಾಲಯದಲ್ಲಿ ತಿರುವಾಯ್ಮೊಟಿ ಗ್ರಂಥವನ್ನು ಪಠಿಸಲು ಮಾಡಿದ ಏರ್ಪಾಡಿನ ವಿವರಗಳು ಅಲ್ಲಿನ ಒಂದು ಶಾಸನದಲ್ಲಿದೆ (ಪಾಂಪು ೬೮). ವಿಟಣ್ಣನೆಂಬಾತ ಪರ್ವದಿನಗಳಂದು ತಿರುವಾಯ್ಮೊಟಿ ಚಿಱಪ್ಪಿ (ಉತ್ಸವದ ಸಮಾರಾಧನೆ)ಗಾಗಿ ಹಾಗೂ ಪ್ರಾಯಶ್ಚಿತ್ತಕರ್ಮ ಮತ್ತು ಅಧಿವಾಸ(ಪವಿತ್ರಾರೋಹಣ ಪ್ರತಿಷ್ಠೆಗಳಿಗೆ ಸಂಬಂಧಿಸಿದ ಕರ್ಮಗಳು)ಗಳ ಸಂದರ್ಭದಲ್ಲಿ ನಿವೇದ್ಯಕ್ಕಾಗಿ ದೇವಾಲಯದ ಶ್ರೀವೈಷ್ಣವರಿಂದ ತತ್ಕಾಲೋಚಿತವಾದ ಬೆಲೆಗೆ ಭೂಮಿಯನ್ನು ಕೊಂಡನೆಂದು ಹೇಳಿದೆ. ತಿರುವಾಯ್ಮೊಟಿ ಎಂಬುದು ಶ್ರೀವೈಷ್ಣವ ಸಂತನಾದ ನಮ್ಮಾಳ್ವಾರ್ ವಿರಚಿಸಿದ ತಮಿಳು ಪ್ರಬಂಧ. ಇದನ್ನು ವಿಷ್ಣುವಿನ ಆಲಯಗಳಲ್ಲಿ ಪೂಜಾ ಸಂದರ್ಭದಲ್ಲಿ ಪಠಿಸುವ ಪದ್ಧತಿ ಇದೆ. ಈ ಭೂಮಿ ಕ್ರಯವನ್ನು ಸೇನಾಪತಿ ಪೆರುವಿಲ್ಲೈ ಎಂದು ಕರೆಯಲಾಗಿದೆ. ವಿಷ್ಣುದೇವಾಲಯಕ್ಕೆ ಸೇರಿದ ಭೂಮಿಯನ್ನು ಸೇನೈಮೊದಲಿಯಾರರ–ವಿಷ್ವಕ್ಸೇನರ–ಹೆಸರಿನಲ್ಲಿ ಮಾರುವುದಕ್ಕೆ ತಮಿಳಿನಲ್ಲಿ ಸೇನಾಪತಿ ಪೆರುವಿಲ್ಲೈ ಎಂದು ಹೆಸರು. ಈ ಶಾಸನದ ಕಾಲ ಕ್ರಿ.ಶ. ೧೨೮೬. ಬಹುಶಃ ಇದೇ ಕಾಲಕ್ಕೆ ಸೇರಿಸಬಹುದಾದ ಪಾಂಪು ೬೦ರಲ್ಲಿ ದೇವಾಲಯದ ವೀರಬಲ್ಲಾಳಮಂಟಪಕ್ಕೆ ಸುಣ್ಣ ಬಳಿಯಲೆಂದು ಗೋಮಠದ ರಾಮಪಿರಾನ್ ಮತ್ತು ತಿರುನರೈಯೂರ್‌ದಾಸನ್ ಎಂಬುವವರು ೫೦ ಗದ್ಯಾಣಗಳನ್ನು ನೀಡಿದರೆಂದಿದೆ. ಈ ತಿರುನರೈಯೂರ್ ದಾಸನನ್ನು ತಿರುವಾಯ್ಮೊಟಿ ಹಾಡುವಾತನೆಂದು ಹೇಳಿದೆ. ಪಾಂಪು ೬೬ರಲ್ಲಿಯೂ ಇದೇ ವಿಷಯವಿದೆ. ಶಾಸನ ಸವೆದಿದ್ದು ಒಂದೆರಡು ಸಾಲುಗಳು ಸ್ಪಷ್ಟವಿಲ್ಲದಿದ್ದರೂ ಇದು ಪಾಂಪು ೬೦ರ ಇನ್ನೊಂದು ಪ್ರತಿ ಎನ್ನಬಹುದು.

ತೊಣ್ಣೂರಿನ ನರಸಿಂಹದೇವಾಲಯವನ್ನು ಚೊಕ್ಕಾಣ್ಡೈಪೆಱ್ಗಡಿ ಎಂಬಾತನು ಕಟ್ಟಿಸಿದನೆಂದೂ ಅದರಲ್ಲಿನ ಒಂದು ಗುಡಿಯಲ್ಲಿ ಕೃಷ್ಣನನ್ನು ಮಟ್ಟಿಯಂಬಾಕ್ಕಂ ಗ್ರಾಮದ ಆಂಡಾಳ್ ಎಂಬಾಕೆ ಪ್ರತಿಷ್ಠಾಪಿಸಿದಳೆಂದೂ ಪಾಂಪು ೧೧೯ರಲ್ಲಿ ಹೇಳಿದೆ. ಶಾಸನದ ಕಾಲ ಕ್ರಿ.ಶ. ೧೧೫೨. ಆ ಶಾಸನದ ಕೆಳಗಡೆ ಇರುವ ಇನ್ನೊಂದು ಶಾಸನದಲ್ಲಿ (ಪಾಂಪು ೧೨೦) ಇದೇ ಆಂಡಾಳ್ ಮತ್ತು ಈಕೆಯ ಪತಿ ಇಳೈಯಬಿರಾನ್‌ಬಟ್ಟನ್ ಆ ವೆಣ್ಣೈಕ್ಕೂತ್ತಪಿಳ್ಳೈ ದೇವರ ನೈವೇದ್ಯಕ್ಕೆ ಹತ್ತು ಹೊನ್ನುಗಳನ್ನು ದತ್ತಿಯಾಗಿ ನೀಡಿದರೆಂದಿದೆ. ಪಿಳ್ಳೈ ಮತ್ತು ವೆಣ್ಣೈಕ್ಕೂತ್ತಪಿಳ್ಳೈ ಎಂಬುವು ಕೃಷ್ಣನ ಹೆಸರುಗಳು.

ಮೇಲುಕೋಟೆಯ ದೇವಾಲಯದ ಭಾಷ್ಯಕಾರರ ಗುಡಿಯಲ್ಲಿ ಅರಸನಾದ ಆರವೀಡು ಶ್ರೀರಂಗರಾಯನ ಆಣತಿಯಂತೆ ಯತಿರಾಜಸಪ್ತತಿ ಎಂಬ ಸ್ತೋತ್ರಗ್ರಂಥವನ್ನು ಪಠಿಸಲು ದೇವಾಲಯದ ಐವತ್ತಿಬ್ಬರು ಮಾಡಿದ ಏರ್ಪಾಡನ್ನು ಪಾಂಪು ೧೩೬ ತಿಳಿಸುತ್ತದೆ. ಅದೇ ಅರಸನ ಇನ್ನೊಂದು ಶಾಸನದಲ್ಲಿ (ಪಾಂಪು ೧೩೯) ರಾಮಾನುಜವಿರಚಿತ ಶ್ರೀಭಾಷ್ಯ, ಶಠಾರಿಸೂಕ್ತಿಶತಕ, ಮುದ್ರಿಕ, ಕೈ(ಕೌ)ಸಿಕ ಪುರಾಣ ಮುಂತಾದವುಗಳ ಪ್ರಸ್ತಾಪವಿದೆ. ಶಾಸನ ಸವೆದಿದ್ದು ವಿವರಗಳು ಲಭ್ಯವಿಲ್ಲವಾಗಿವೆ. ಏಟೂರು ತಾತಾಚಾರ್ಯರಿಗೆ ಮಾಡಲಾದ ಗೌರವದ ಪ್ರಸ್ತಾಪ ಇದರಲ್ಲಿದೆ. ಅವರಿಗೆ ದೇವರ ಸನ್ನಿಧಾನದಲ್ಲಿ ಮುದ್ರೆಯೊಂದನ್ನಿತ್ತು ಅರುಳುಪಾಡು, ತೀರ್ಥಪ್ರಸಾದಗಳನ್ನು ತಿರುವಧ್ಯಯನಉತ್ಸವ (ತಿರುನಾಳ್)ದ ಪ್ರಸಾದದಲ್ಲಿ ಒಂದು ಭಾಗವನ್ನು ನೀಡಬೇಕೆಂದೂ ಪಾಂಪು ೧೪೦ರಲ್ಲಿ ಹೇಳಿದೆ. ಈ ಶಾಸನದ ಕಾಲ ಕ್ರಿ.ಶ. ೧೫೮೫. ಈ ಏಟೂರು ತಾತಾಚಾರ್ಯ ಕಾಂಚೀಪುರದ ವರದರಾಜ ದೇವಾಲಯದ ಶಾಸನಗಳಲ್ಲೂ ಕಾಣಿಸಿಕೊಂಡಿದ್ದಾನೆ. ಈತನೊಬ್ಬ ಉದ್ದಾಮಪಂಡಿತನಾಗಿದ್ದನು.

ಕ್ರಿ.ಶ. ೧೧೯೧ನೆಯ ವರ್ಷದ ತೊಣಚಿಯ ಶಾಸನದಲ್ಲಿ (ಕೃಪೇ ೪೮) ಅಲ್ಲಿನ ಸಿದ್ಧನಾಥದೇವರಿಗೆ ಇಮ್ಮಡಿ ವೀರ ಬಲ್ಲಾಳನು, ಸಮಸ್ತ ಪ್ರಭುಗಾವುಂಡುಗಳು ದೇವರ ಅಂಗರಂಗಭೋಗನಿವೇದ್ಯಜೀರ್ಣೋದ್ಧಾರಕ್ಕೆ ಹಾಗೂ ಗಣಂಗಳ ಆಹಾರ ದಾನಕ್ಕೆ ಭೂಮಿದಾನ ಮಾಡಿದ ಪ್ರಸ್ತಾಪವಿದೆ. ಇಲ್ಲಿ ಸಿದ್ಧನಾಥದೇವರನ್ನು ಅಸಂಖ್ಯಾತಗಣಂಗಳ ಪ್ರಾಣನಾಥದೇವರೆಂದು ವರ್ಣಿಸಿ, ಆ ಸ್ಥಾನಕ್ಕೆ ಅಸಂಖ್ಯಾತಗಣಂಗಳ ಕುಮಾರನು ಒಡೆಯನೆಂದು ಹೇಳಿದೆ. ಈತ ಯಾರು ಎಂಬುದನ್ನು ಸೂಚಿಸಿಲ್ಲ.

ನಂದಿನಾಥ ವೀರಭದ್ರರು ಮುಖ್ಯವಾದ ಪ್ರಿಥುವಿಯ ಮಹಾಗಣಂಗಳು ಹೊಇಸಣನಾಡು ಕೊಂಗನಾಡು ಮುಖ್ಯವಾದ ಹದಿನೆಂಟು ಸೀಮೆಯೊಳಗೆ ಹೊಸಬಳಲ ಬಡಗಣ ಹೆಬಾಗಿಲ ಆಲದಮರದೆಲೆ ಸಿಂಹಾಸನ ವಜ್ರಬಇಸಣಿಗೆಯನಿಕ್ಕಿ ಹೊಸ ಹೊಳಲನ್ನು ರಾಯಸಮುದ್ರವೆಂಬ ಆಗ್ರಹಾರವಾಗಿ ಮಾಡಿದರೆಂದು ಕ್ರಿ.ಶ. ೧೩೦೬ನೆಯ ವರ್ಷದ ಕೃಪೇ ೮ರಲ್ಲಿ ಹೇಳಿದೆ. ವಜ್ರಬಇಸಣಿಗೆಯನಿಕ್ಕಿ ಎಂಬ ಮಾತಿಗೆ ವಜ್ರಾಸನದಲ್ಲಿ ಕುಳಿತು ಎಂಬ ಅರ್ಥವನ್ನು ಕೊಡಲಾಗಿದೆ.[1] ಇಲ್ಲಿ ಆಲದಮರದೆಲೆ

[1] K. V. Ramesh, B. R. Gopal *etal* (ed.,): *Śrīkaṇṭhikā pp.* 90-91.

ಸಿಂಹಾಸನ ಎಂಬ ಮಾತು ಗಮನಾರ್ಹ. ಆಲದಮರದ ಸಿಂಹಾಸನ ಎಂದರೆ ಅರ್ಥವಾದೀತು. ಆಲದಮರದೆಲೆ ಸಿಂಹಾಸನ ಎಂದರೇನು ? ಆಲದಮರದ ಕೆಳಗೆ ಇವರೆಲ್ಲಾ ಕುಳಿತು ಸಭೆ ನಡೆಸಿದರೆನ್ನಬಹುದೇ ? ಆಲದಮರದೆಲೆ ಎಂಬುದು ಆಲದಮರದೆಡೆ ಎಂದಿದ್ದಿರಬಹುದೇ ?

ಪಾಂಪು ೧೮೫ ಮೇಲುಕೋಟೆಯ ನಾಮದಕಟ್ಟೆ ತೋಟದಲ್ಲಿ ದೊರೆತ ಶಾಸನ. ಎಂಬೆರುಮಾನಾರ್ (ರಾಮಾನುಜಾಚಾರ್ಯರು) ಅಲ್ಲಿನ ಮಣ್ಣನ್ನು ಪವಿತ್ರವಾದುದು (ತಿರುಮಣ್) ಎಂದು ಭಾವಿಸಿದುದರಿಂದ ಆ ಭೂಮಿಯ ಸ್ವಾಮ್ಯವನ್ನು ತಿರುಮಣ್ಣ ಪೆರುಮಾಳಿಗೆ ಹೆಡತಲೆಯ ಪೆರುಮಾಳದೇವದಣ್ಣಾಯಕನ ಮಗ ಇಮ್ಮಡಿರಾವುತ್ತರಾಯ ಮಾದಪ್ಪದಣ್ಣಾಯಕನು ಕ್ರಿ.ಶ. ೧೩೧೯ರಲ್ಲಿ ದಾನವಾಗಿ ನೀಡಿದನು. ತಿರುಮಣ್ ಎಂಬುದು ಶ್ರೀವೈಷ್ಣವರು ಧರಿಸುವ ಬಿಳಿಯ ನಾಮಕ್ಕೆ ಅವಶ್ಯಕವಾದ ಮಣ್ಣು. ಬಹುಶಃ ಇಲ್ಲಿ ಅದು ಕಂಡುಬರುವುದರಿಂದ ಈ ಮಣ್ಣನ್ನುಳ್ಳ ಭೂಮಿಯನ್ನು ದಾನವಾಗಿ ನೀಡಲಾಯಿತು. ಈ ಮಣ್ಣನ್ನು ರಾಮಾನುಜಾಚಾರ್ಯರು ಕಂಡರು ಎಂಬುದು ಬಹುಶಃ ಸಾಂಪ್ರದಾಯಿಕವಾಗಿ ಆ ವೇಳೆಗೆ ಬೆಳೆದುಬಂದಿದ್ದ ನಂಬುಗೆ. ಈ ಶಾಸನ ರಾಮಾನುಜಾಚಾರ್ಯರ ಕಾಲದ ಎರಡು ಶತಮಾನಗಳಿಗೂ ಹೆಚ್ಚಿನ ಕಾಲದ ನಂತರ ಹುಟ್ಟಿದೆ ಎಂಬುದನ್ನು ಗಮನಿಸಬೇಕು.

ಪಾಂಪು ೨೩೩ನೆಯ ಶಾಸನದಲ್ಲಿ ಹಳೇಬೀಡಿನ ಕಂಭೇಶ್ವರದೇವರಿಗೆ ೨೦೦ ಕಾಲ (ಅಂದರೆ ೨೦೦ ವರ್ಷಗಳ ಕಾಲ ?) ಪೂಜೆ ಇಲ್ಲದಿರಲು ಮಂಜಯಪ್ಪ ಮತ್ತು ಇತರರು ಅದನ್ನು ಪುನರುಜ್ಜೀವನಗೊಳಿಸಿದರೆಂದು ಹೇಳಿದೆ. ಶಾಸನದ ಕಾಲ ಕ್ರಿ.ಶ. ೧೫೩೮ನೆಯ ಫೆಬ್ರವರಿ ೧೧. ಎಂದಮೇಲೆ ಈ ದೇವಸ್ಥಾನದಲ್ಲಿ ಪೂಜೆ ೧೩೩೮ರ ಸುಮಾರಿಗೆ ನಿಂತುಹೋಗಿರಬೇಕು. ದೇವಾಲಯದ ತಳಪಾದಿಯ ದಿಂಡುಕಲ್ಲಿನ ಮೇಲಿನ ಇನ್ನೊಂದು ಶಾಸನದಲ್ಲಿ (ಪಾಂಪು ೨೩೧) ಹೊಯ್ಸಳ ವೀರಬಲ್ಲಾಳನು ಮಾಡಿದ ಗ್ರಾಮ ದಾನದ ಉಲ್ಲೇಖವಿದೆ. ಈ ವೀರಬಲ್ಲಾಳನು ಮುಮ್ಮಡಿ ವೀರಬಲ್ಲಾಳನೆಂದು ಭಾವಿಸಿದರೆ ಪಾಂಪು ೨೩೧ನೆಯ ಶಾಸನದಲ್ಲಿ ಉಕ್ತವಾದ ದಾನವನ್ನು ನೀಡಿದ ಸ್ವಲ್ಪ ಕಾಲದ ನಂತರ ಪೂಜಾದಿಗಳು ನಿಂತಿರಬೇಕೆಂದು ಊಹಿಸಬಹುದು.

ಕ್ರಿ.ಶ. ೧೫೩೭ರಲ್ಲಿ ಬಾಬುಸೆಟ್ಟಿಯು ಸಿಂದಗಟ್ಟದ ಒಳಕೇರಿಯಲ್ಲಿ ಕಲ್ಲಿನ ಮಸೀದಿಯೊಂದನ್ನು ಕಟ್ಟಿಸಿದನು (ಪಾಂಪು ೯೨). ಅದಕ್ಕೆ ರಂಗೈನಾಯಕನು ಶಿವಪುರಗ್ರಾಮವನ್ನೂ ಹಬೀಬನ ಒಂದು ಮನೆಯನ್ನೂ ೧೪ ಗದ್ಯಾಣಗಳು ಹಾಗೂ ಅದರ ಮೇಲಣ ಕಾಣಿಯನ್ನೂ ಸರ್ವಮಾನ್ಯವಾಗಿ ಬಿಟ್ಟನು. ಶಾಸನದ ಕಾಲದಲ್ಲಿ ವಿಜಯನಗರ ಹಾಗೂ ಬಹಮನಿಸುಲ್ತಾನರ ನಡುವಣ ವೈಷಮ್ಯ ಉತ್ಕಟಾವಸ್ಥೆಗೇರಿ, ಮುಂದೆ ೮ ವರ್ಷಗಳ ನಂತರ ರಕ್ಕಸತಂಗಡಿ ಕದನವಾಯಿತು. ಆದರೂ ಅದು ರಾಜಕೀಯ ಹೋರಾಟವಾಗಿದ್ದು ಸಾಮಾನ್ಯಪ್ರಜೆಗಳು ತಮ್ಮದಲ್ಲದ ಇತರ ಧರ್ಮಗಳನ್ನೂ ಪೂಜ್ಯಭಾವದಿಂದ ಕಾಣುತ್ತಿದ್ದರೆಂಬುದಕ್ಕೆ ಈ ಶಾಸನ ನಿದರ್ಶನ. ಮಸೀದಿಯನ್ನು ಕಲ್ಲಮಸೀತಿಯ ದೇವಸ್ಥಾನ ಎಂದು ಕರೆದಿರುವುದೂ ಹಬೀಬನ ಮನೆಯನ್ನು ಸರ್ವಮಾನ್ಯವಾಗಿ ಮಾಡಿದುದೂ ಗಮನಾರ್ಹ. ಹಬೀಬನು ಬಹುಶಃ ಆ ಮಸೀದಿಯ ಖಾಜಿಯಾಗಿದ್ದು, ಆತನು ವಾಸಿಸುತ್ತಿದ್ದ ಮನೆಯನ್ನು ಸರ್ವಮಾನ್ಯವಾಗಿ ಮಾಡಲಾಯಿತೆನ್ನಬಹುದು.

ಮೇಲುಕೋಟೆಯ ದೇವಾಲಯದ ಆಚಾರ್ಯಪುರುಷನಾದ ಕೈಂಕರ್ಯಂ ತಿರುಮಲಾಚಾರ್ಯರ ಮೊಮ್ಮಗ ತಿರುಮಲಾಚಾರ್ಯನು ದೇವರಿಗೆ ಮಂಟಪವೊಂದನ್ನು ಕ್ರಿ.ಶ. ೧೮೪೬ರಲ್ಲಿ ಕಟ್ಟಿಸಿದನೆಂದು (ಪಾಂಪು ೨೧೯) ಹೇಳಿದೆ. ಆದರೆ ಅದೇ ಮಂಟಪದ ಮಧ್ಯದ ಅಂಕಣದ ಇನ್ನೊಂದು ತೊಲೆಯ ಮೇಲಿನ ತಮಿಳು ಗ್ರಂಥಲಿಪಿಯ ಸಂಸ್ಕೃತ ಶಾಸನದಲ್ಲಿ (ಪಾಂಪು ೨೧೦) ಶೇಷಾನ್ವಯದ ಶ್ರೀಶೈಲಗುರುವು ಯಾದವಗಿರಿಯ ಮೇಲುಭಾಗದಲ್ಲಿ ವೈಕುಂಠನಾಥದೇವರನ್ನು, ಹತ್ತು ಸೂರಿಗಳ (ಆಳ್ವಾರುಗಳ) ವಿಗ್ರಹಗಳನ್ನು ಪ್ರತಿಷ್ಠಾಪಿಸಿದನೆಂದು ಹೇಳಿರುವುದಲ್ಲದೆ ಆ (ಶಾಸನವಿರುವ) ಮಂಟಪ (ಮಣ್ಡಪೋಯಂ)ವನ್ನು ಸಹಸ್ರಗಾಥಾ ಉತ್ಸವವನ್ನು ಆರಂಭಿಸಲೆಂದು ಕಟ್ಟಿಸಲಾಯಿತೆಂದೂ ಹೇಳಿದೆ. ಬಹುಶಃ ಈ ಮಧ್ಯದ ಅಂಕಣವನ್ನು ಮೊದಲು ಕಟ್ಟಿಸಲಾಗಿದ್ದು ನಂತರ ೧೮೪೬ರಲ್ಲಿ ಮುಂದುಗಡೆ ಇನ್ನೊಂದು ಮಂಟಪವನ್ನು ಇದಕ್ಕೆ ಸೇರಿಸಲಾಯಿತೆಂದು ಊಹಿಸಬಹುದು.

ಬ್ರಿಟಿಷರ ಕಾಲದಲ್ಲಿ ಪಾಂಡವಪುರದಲ್ಲಿ ಸೈನ್ಯದ ನೆಲೆಯೊಂದಿತ್ತು. ಅಲ್ಲಿನ ಸೈನಿಕರು ಅಥವಾ ಅವರ ಸಂಸಾರಕ್ಕೆ ಸೇರಿದವರು ಮರಣಹೊಂದಿದಾಗ ಕೆಲವು ಸಂದರ್ಭಗಳಲ್ಲಿ ಸ್ಮಾರಕಶಿಲೆಗಳನ್ನು ನೆಡಿಸಲಾಗುತ್ತಿತ್ತು. ಪಾಂಪು ೧ರಿಂದ ೧೦ ಇಂತಹ ಸ್ಮಾರಕಶಿಲೆಗಳ ಮೇಲಿನ ಶಾಸನಗಳು. ಮರಣಹೊಂದಿದವರಲ್ಲಿ ಕೆಲವರು ಶ್ರೀವೈಷ್ಣವರಾಗಿದ್ದರು. ಜಮೇದಾರ್ ಪಿ. ವೆಂಕಟರಾಮನಾಯುಡು ಚಕ್ರವರ್ತಿ ನಲ್ಲಾಕಯ್ಯಂಗಾರ್ಯರ ಪಾದಸೇವಕ(ಶಿಷ್ಯ)ನಾಗಿದ್ದ. ೨೦ನೆಯ ರೆಜಿಮೆಂಟಿಗೆ ಸೇರಿದ್ದ ಈತ ಒಟ್ಟು ೩೭ ವರ್ಷ ಸೇವೆ ಸಲ್ಲಿಸಿದ್ದನೆಂದು ಕ್ರಿ. ಶ. ೧೮೫೦ರ ಪಾಂಪು ೧ರಿಂದ ತಿಳಿದಿದೆ. ಕ್ರಿ. ಶ. ೧೮೫೨ರಲ್ಲಿ ಮರಣಹೊಂದಿದ ಜಗನಾಯನು ಗ್ರಾಮ್ವಿಯರ್ ಕಂಪೆನಿಯ ೩೮೦ನೆಯ ರೆಜಿಮೆಂಟಿನಲ್ಲಿ ಲ್ಯಾನ್ಸ್‌ನಾಯಕ ಆಗಿದ್ದ (ಪಾಂಪು ೨). ೧೮೪೯ರಲ್ಲಿ

ಮರಣಹೊಂದಿದ ಅದೆಮ್ಮ ಎಂಬಾಕೆ ಜೊಮಿಸೆಟ್ಟಿಸಿಸಾಯಿ ಅಕ್ಕಯ್ಯನ ಪತ್ನಿ (ಪಾಂಪು ೪). ಗಂಡಸೊಬ್ಬ ಅಕ್ಕಯ್ಯ ಎಂದು ಹೆಸರಿಟ್ಟುಕೊಂಡಿರುವುದು ಗಮನಾರ್ಹ. ಪಾಂಪು ೧೦ರಲ್ಲಿ ನಂದ್ಯಾಲದ ಕೃಷ್ಣಮ್ಮ ನಾಯಕ ಎಂಬಾತನ ಉಲ್ಲೇಖವಿದೆ. ಆಂಧ್ರಪ್ರದೇಶದಲ್ಲಿ ಹಲವಾರುಕಡೆ ಈಗಲೂ ಇಂತಹ ಹೆಸರುಗಳುಳ್ಳವರನ್ನು ಕಾಣಬಹುದು. ಪಷಟ್ಟಪಟ್ಟಾಳಂನ ಧರ್ಮರಾಜ ದೇವಸ್ಥಾನದ ಪೂಜಾರಿಯಾದ ನಾಗಪ್ಪನ ಮಗಳು ಹದಿನಾರು ವರ್ಷದ, ಗುಣವತಿಯಾದ ಕುಪ್ಪಮ್ಮಾಳ್ ಎಂಬ ಯುವತಿ ೧೮೪೮ರಲ್ಲಿ ವೈಕುಂಠಪದವಿಯನ್ನು ಪಡೆದಾಗ ವನ್ನಿಯಕುಲದ ತೊಂಡೈಮಂಡಲಪ್ಪಾನ್ ಎಂಬಾತನು ಬೃಂದಾವನವೊಂದನ್ನು ಕಟ್ಟಿಸಿದ (ಪಾಂಪು ೯). ಪಾಂಪು ೨ರಲ್ಲಿ ಕಾಣಿಸಿಕೊಳ್ಳುವ ನಂದ್ಯಾಲ ಕೃಷ್ಣಮ್ಮನಾಯುಡು ಪಾಂಪು ೧೦ರಲ್ಲಿ ಉಲ್ಲೇಖಿತನಾದ ನಂದ್ಯಾಲ ಕೃಷ್ಣಮ್ಮನಾಯಕ ಈ ಇಬ್ಬರೂ ಅಭಿನ್ನ ವ್ಯಕ್ತಿಗಳೇ.

ಕನ್ನಂಬಾಡಿಯಲ್ಲಿ ನಂಜಯ್ಯನೆಂಬಾತನು ಕ್ರಿ. ಶ. ೧೮೧೮ರಲ್ಲಿ ನೂತನ ದೇವಾಲಯವನ್ನು ಕಟ್ಟಿಸಿ ಮಹಾಕಾಳಿ, ಮಹಾಲಕ್ಷ್ಮಿ ಮತ್ತು ಸರಸ್ವತೀ ದೇವತೆಗಳನ್ನು ಪ್ರತಿಷ್ಠಾಪಿಸಿದನು. ಸೀಮೆಯೊಳಗೆ ವಾಂತಿಭ್ರಾಂತಿಯಾಗಿ ಜನರು ಮೃತರಾಗುತ್ತಿದ್ದಾಗ ಅದನ್ನು ನಿವಾರಿಸಲು ಕೊಲ್ಲಾಪುರದ ಮಹಾಲಕ್ಷ್ಮಿ ಮತ್ತು ವುಜನಿಯ ಮಹಾಕಾಳಿ ದೇವತೆಗಳು ನಂಜಮ್ಮ ಎಂಬ ಕನ್ನಿಕೆಯ ಮೇಲೆ ಆವಿರ್ಭವಿಸಿ ರೋಗ ಪರಿಹಾರವಾಗುವಂತೆ ಮಾಡಿದರಂತೆ. ಆದಕಾರಣವೇ ಆ ದೇವತೆಗಳಿಗೆಂದು ಆಲಯವನ್ನು ಕಟ್ಟಿಸಲಾಯಿತು. ಈ ನಂಜಮ್ಮ ಗಂಗಡಿಕಾರ ಕುಲದಲ್ಲಿ ಜನಿಸಿದವಳು. ತಿಮ್ಮಮ್ಮ ಈಕೆಯ ತಾಯಿ. ಬೋಗೇಗೌಡನ ಪೌತ್ರ, ಮರಿನಂಜೇಗೌಡನ ಪುತ್ರನಾದ ಬೋಗೌಡ ತಂದೆ. ಈಕೆಗೆ ಸಲ್ಲಿಸಲಾದ ಕಾಣಿಕೆಗಳಿಂದಲೇ ದೇವಾಲಯವನ್ನು ಕಟ್ಟಿಸಲಾಯಿತೆಂದು ಪಾಂಪು ೨೩ರಲ್ಲಿ ಹೇಳಿದೆ. ಈ ಕಾರಣದಿಂದ ಈಕೆಗೆ ಆವೇಶದಮ್ಮ ಎಂತಲೇ ಹೆಸರಾಗಿತ್ತು (ಪಾಂಪು ೨೪). ಈ ದೇವಾಲಯದ ರಂಗಮಂಟಪ ಮತ್ತು ಮುಖಮಂಟಪವನ್ನು ಸಹ ೧೮೩೫ರಲ್ಲಿ ಜೀರ್ಣೋದ್ಧಾರಗೊಳಿಸಲಾಯಿತು (ಪಾಂಪು ೨೨). ಪಾಂಪು ೨೧ರಲ್ಲಿ ೧೮೬೨ರಲ್ಲಿ ಮರಿನಂಜೇಗೌಡನ ಪ್ರಪೌತ್ರ ನಂಜೇಗೌಡನ ಮೊಮ್ಮಗ ಅಣ್ಣಯ್ಯನ ಮಗ ಶಿವನಂಜಯ್ಯನು ದೇವಸ್ಥಾನದ ಧ್ವಜಸ್ತಂಭಕ್ಕೆ ಹಿತ್ತಾಳೆಯ ಹೊದಿಕೆ ಹಾಕಿಸಿದನೆಂದಿದೆ. ಇದು ದೇವಾಲಯ ಕಟ್ಟಿಸಿದ ೪೪ ವರ್ಷಗಳ ನಂತರ. ಆವೇಶದಮ್ಮನ ತಾತ ಮರಿನಂಜೇಗೌಡನೂ ಈ ಶಾಸನದಲ್ಲಿನ ಮರಿನಂಜೇಗೌಡನೂ ಅಭಿನ್ನರಾದಲ್ಲಿ ಮರಿನಂಜೇಗೌಡನಿಗೆ ಬೋಗೌಡನಲ್ಲದೆ ನಂಜೇಗೌಡನೆಂಬ ಇನ್ನೊಬ್ಬ ಮಗನಿದ್ದನೆಂದಾಗುತ್ತದೆ. ದೇವಾಲಯವನ್ನು ಕಟ್ಟಿಸಿದನೆನ್ನಲಾದ ನಂಜಯ್ಯ ಈತನೇ ಆಗಿರಬಹುದೇ? ಆವೇಶದಮ್ಮ ಈತನ ಸೋದರನ ಮಗಳಾಗುತ್ತಾಳೆ.




## ಛಂದಸ್ಸು[1]

ಈ ಶಾಸನ ಸಂಪುಟದಲ್ಲಿ ಸಂಗ್ರಹಿತವಾಗಿರುವ ಪ್ರತಿಶಾಸನದಲ್ಲೂ–ಅದು ಪದ್ಯಶಾಸನವಾಗಿರಲಿ ಅಥವಾ ಪದ್ಯಗದ್ಯಗಳು ಕೂಡಿರುವ ಶಾಸನವಾಗಿರಲಿ–ಕಂಡುಬರುವ ಪದ್ಯಗಳ ಛಂದಸ್ಸುಗಳನ್ನು ಗುರುತಿಸಿ ಆಯಾ ಶಾಸನದ ಅಡಿಟಿಪ್ಪಣಿಯಲ್ಲಿ ತೋರಿಸಿದೆ. ಕನ್ನಡ ನಾಡಿನ ಶಾಸನಕವಿತ್ವದಲ್ಲಿ ಛಂದಸ್ಸು ವಹಿಸಿರುವ ಪಾತ್ರ ಯಾವ ರೀತಿಯದು, ಅಲ್ಲಿ ಯಾವ ಪ್ರಮಾಣದಲ್ಲಿ ಹೇಗೆ ಛಂದಸ್ಸುಗಳು ಹಂಚಿಕೆಯಾಗಿವೆ, ಅಂತಹ ಹಂಚಿಕೆಯಲ್ಲಿ ಕಂಡುಬರುವ ಕವಿಗಳ ವಿದ್ವತ್ತಿನ ದೃಷ್ಟಿ ಯಾವ ತೆರನಾದ್ದು–ಈ ಮುಂತಾದುವನ್ನು ತಿಳಿಯುವುದಾದರೆ ಶಾಸನಗಳ ಸಾಹಿತ್ಯಿಕ ಮೌಲ್ಯವನ್ನು ಗುರುತಿಸುವ ಕೆಲಸ ಸ್ವಲ್ಪಮಟ್ಟಿಗೆ ಸುಲಭವಾಗುತ್ತದೆ ಎನ್ನುವುದೇ ಇದರ ಉದ್ದೇಶ. ಅಲ್ಲದೆ ಕನ್ನಡ ಭಾಷೆಯ ರಚನೆಯ ಮೇಲೆ ಸಂಸ್ಕೃತ ಭಾಷೆ ಛಂದಸ್ಸುಗಳು ಉಂಟುಮಾಡಿರುವ

[1] ಪೀಠಿಕೆಯ ಈ ಭಾಗವನ್ನು ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರಿಗಳು ಬರೆದಿದ್ದಾರೆ.

ಪ್ರಭಾವವನ್ನು ಕನ್ನಡ ಛಂದಸ್ಸುಗಳ–ಎರವಲುಕೊಂಡ ಮತ್ತು ದೇಶೀಯವಾದ–ಐತಿಹಾಸಿಕ ಬೆಳವಣಿಗೆಯ ಮಜಲುಗಳನ್ನು ಗುರುತಿಸುವುದಕ್ಕೆ ಕೂಡ ಇದರಿಂದ ತುಂಬ ಅನುಕೂಲವಾಗುತ್ತದೆ.

ಸಂಸ್ಕೃತ ಕನ್ನಡ ಶಾಸನಗಳ ಛಂದೋವೈವಿಧ್ಯವನ್ನು ಸ್ವತಂತ್ರವಾಗಿಯೂ ತೌಲನಿಕವಾಗಿಯೂ ಅಧ್ಯಯನ ಮಾಡುವುದು ಫಲಕಾರಿಯಾದ್ದೇ. ವಾಸ್ತವವಾಗಿ ಸಂಸ್ಕೃತ ಕನ್ನಡ ಭಾಷೆಗಳಲ್ಲಿ ಶಾಸನಛಂದಸ್ಸಿನ ಅಧ್ಯಯನವಿರಲಿ, ಛಂದಸ್ಸಿನ ವ್ಯಾಪಕವಾದ ಅಧ್ಯಯನವೇ ಇನ್ನೂ ನಡೆದಿಲ್ಲ. ಭಾವವಾಹಿಯಾದ ಭಾಷೆ ನಿಯತಛಂದಸ್ಸಿನ ಚೌಕಟ್ಟಿನಲ್ಲಿ ಹೇಗೆ ಅಪೂರ್ವವಾಗಿ ಹೆಣೆದು ಕೊಳ್ಳುತ್ತದೆ ಎನ್ನುವ ಕವಿಕಾರ್ಯರಹಸ್ಯದ ವಿಶ್ಲೇಷಣೆ ಎಷ್ಟು ಚೆನ್ನಾಗಿ ನಡೆದರೆ ಪ್ರಾಚೀನ ಕವಿತ್ವ ಅಷ್ಟು ಚೆನ್ನಾಗಿ ಅರ್ಥವಾಗುತ್ತದೆ. ತೆಲುಗು ಭಾಷೆಯಲ್ಲಿ ಪ್ರಾಚೀನ ಕಾವ್ಯದ ಹಾಗೂ ಶಾಸನ ಕವಿತ್ವದ ಛಂದಸ್ಸಿನ ಅಭ್ಯಾಸ ಕೆಲಮಟ್ಟಿಗೆ ನಡೆದಿದೆ. ಅಂಥ ಪ್ರಯತ್ನ ಕನ್ನಡ ಭಾಷೆಯಲ್ಲಿ ಕೂಡ ನಡೆಯುವುದಕ್ಕೆ ಹೇರಳವಾಗಿ ಉಪಪತ್ತಿಯುಂಟು.

ಈ ಸಂಪುಟದಲ್ಲಿ ಪದ್ಯಗಳ ಛಂದಸ್ಸುಗಳನ್ನು ಗುರುತಿಸುವಾಗ ಅನುಸರಿಸಿರುವ ಕ್ರಮಗಳು ಈ ರೀತಿಯಾಗಿವೆ :

೧. ಛಂದಸ್ಸುಗಳ ಹೆಸರುಗಳನ್ನು ಎಚ್. ಡಿ. ವೇಲಣಕರ್ ಅವರು ಸಂಪಾದಿಸಿರುವ 'ಜಯದಾಮನ್' ಸಂಕಲನ ಗ್ರಂಥದ (Haritosha Samiti, Bombay, 1949) ಮತ್ತು ಅವರೇ ಸಂಪಾದಿಸಿರುವ ಹೇಮಚಂದ್ರಕೃತ 'ಛಂದೋನುಶಾಸನ'ದ (Singhi Jain Series—No 49, Bombay, 1961) ಕೊನೆಗೆ ಕೊಟ್ಟಿರುವ ವಿಸ್ತಾರವಾದ ಪರಿಶಿಷ್ಟಗಳನ್ನು ಪರಿಶೀಲಿಸಿ ಆಯ್ದುಕೊಂಡಿದೆ. ಕೆಲವೊಮ್ಮೆ–ಮುಖ್ಯವಾಗಿ ಅಚ್ಚಕನ್ನಡ ವೃತ್ತಗಳ ವಿಷಯದಲ್ಲಿ—ನಾಗವರ್ಮನ (ಸು. ೯೯೦) ಕನ್ನಡ 'ಛಂದೋಂಬುಧಿ'ಯನ್ನೂ ಉಪಯೋಗಿಸಿದೆ. ಆದ್ದರಿಂದ ಆಯಾ ಛಂದಸ್ಸಿನ ಹೆಸರು, ಲಕ್ಷಣ ಇತ್ಯಾದಿ ವಿವರಗಳು ಯಾವ ಛಂದೋಗ್ರಂಥದಲ್ಲಿ ಎಲ್ಲಿ ಬಂದಿವೆಯೆಂಬುದನ್ನು ತಿಳಿಯಬೇಕಾದರೆ ಮೊದಲೆರಡು ಆಕರಗಳ ಪರಿಶಿಷ್ಟಗಳನ್ನೂ ಕನ್ನಡ 'ಛಂದೋಂಬುಧಿ'ಯನ್ನೂ ಪರಿಶೀಲಿಸಬೇಕಾಗುತ್ತದೆ.

೨. ಮೊದಲೆರಡು ಆಕರಗಳನ್ನು ಉಪಯೋಗಿಸುವಾಗ, ಸಾಮಾನ್ಯವಾಗಿ ಪಿಂಗಲ ಮುಂತಾದ ಪ್ರಾಚೀನ ಛಂದಶ್ಶಾಸ್ತ್ರ ಕಾರರು ಕೊಡುವ ಹೆಸರುಗಳಿಗೆ ಆದ್ಯತೆ ಕೊಟ್ಟಿದೆ ; ಪಿಂಗಲನ 'ಛಂದಸ್ಸೂತ್ರ'ಗಳಲ್ಲಿ ದೊರೆಯದಿದ್ದಾಗ ಮಾತ್ರ ಕಾಲಾನುಕ್ರಮ ವನ್ನು ಹಿಡಿದು ಬೇರೆಯವರು ಕೊಡುವ ವೃತ್ತನಾಮಗಳನ್ನು ಗ್ರಹಿಸಲಾಗಿದೆ. ಸಾಮಾನ್ಯವಾಗಿ ಛಂದಸ್ಸುಗಳ ಜನಪ್ರಿಯವಾದ ಹೆಸರುಗಳನ್ನು ಮಾನ್ಯ ಮಾಡುವಾಗ ಕೆಲವೊಮ್ಮೆ ಈ ಕ್ರಮದಲ್ಲಿ ಸ್ವಲ್ಪ ಏರುಪೇರಾಗಬಹುದು.

೩. ಅಕ್ಷರಗಳು ಅಳಿಸಿಹೋಗಿರುವುದು ಮುಂತಾದ ಯಾವುದಾದರೂ ಕಾರಣದಿಂದ ವೃತ್ತವನ್ನು ಪೂರ್ಣವಾಗಿ ಗುರುತಿಸಲು ಸಾಧ್ಯವಾಗದಿದ್ದಾಗ, ಇಂತಹವೇ ಕಾರಣಗಳಿಂದ, ಛಂದಸ್ಸು ಗೊತ್ತಾದರೂ ಪದ್ಯವು ಅಪೂರ್ಣವಾಗಿದ್ದಾಗ ಕೆಲವೊಮ್ಮೆ ಪದ್ಯದ ಹೆಸರನ್ನು ಸೂಚಿಸಿಲ್ಲ (ಉದಾ : ಪಾಂಪು ೨೩೬ ; ಶ್ರೀಪ ೭೮).

೪. ಛಂದಸ್ಸಿನ ದೃಷ್ಟಿಯಿಂದ ಸರಿಯಾಗಿದ್ದರೂ ಇಲ್ಲದಿದ್ದರೂ ಪಾದಗಳು ಪೂರ್ಣವಾಗಿಲ್ಲದ ಪದ್ಯಜಾತಿಗಳು ಕಾಣಿಸಿ ಕೊಂಡಾಗ ಅಂತಹ ಪದ್ಯಜಾತಿಗಳ ಮಗ್ಗುಲಿಗೆ 'ಅಸಮಗ್ರ' ಎಂದು ಬರೆದಿದೆ. (ಉದಾ : ಪಾಂಪು ೯೯, ೨೧೪ ; ಶ್ರೀಪ ೨೪).

೫. ಅಲ್ಪ ಸ್ವಲ್ಪ ಸವರಣೆಗಳಿಂದ ಓದುಗರೇ ತಿದ್ದಿಕೊಳ್ಳಬಹುದಾದ ಲಿಪಿಕಾರಸ್ಖಾಲಿತ್ಯಗಳು ಬಹು ವಿರಳವಾಗಿ ಬಂದಿದ್ದಲ್ಲಿ, ಅಂಥ ಪದ್ಯಗಳನ್ನು ಶುದ್ಧವಾದವೆಂದೇ ಗ್ರಹಿಸಿ ಆಯಾ ಛಂದಸ್ಸಿನ ಹೆಸರನ್ನು ಸೂಚಿಸಿದೆ (ಉದಾ : ಕೃಪೇ ೪೮). ಪ್ರಸ್ತಾರದಿಂದ ಇಂತಹ ಛಂದಸ್ಸು ಎಂದು ನಿರ್ದಿಷ್ಟವಾಗಿ ತಿಳಿಯುವ, ಆದರೆ ಸಾಮಾನ್ಯವಾಗಿ ಸವರಣೆಗಳಿಂದ ತಿದ್ದಿಕೊಳ್ಳಲು ಸಾಧ್ಯವಾಗದಂತೆ ಬಹುವಾಗಿ ಕೆಟ್ಟಿರುವ ಪದ್ಯಗಳ ವಿಷಯದಲ್ಲಿ ಆಯಾ ಪದ್ಯಜಾತಿಯ ಮಗ್ಗುಲಿಗೆ 'ಅಶುದ್ಧ' ಎಂದು ಬರೆದಿದೆ (ಉದಾ : ಕೃಪೇ ೩, ೭೩, ೮೨ ; ಪಾಂಪು ೯೯ ; ಶ್ರೀಪ ೨೧).

೬. ವೃತ್ತಜಾತಿ ಇಂಥದೆಂದು ನಿರ್ಣಯಿಸಲು ಸಾಧ್ಯವಾಗದೆ ಇದ್ದಾಗ, ನಿರ್ಣಯಿಸಲು ಸಾಧ್ಯವಿದ್ದರೂ ಪಾದಗಳಲ್ಲಿ ಎಲ್ಲಿಯಾದರೂ ವಿಭಿನ್ನ ಲಕ್ಷಣ ತೋರುವಂತಿದ್ದಾಗ, ಬೇರೆ ಬಗೆಯ ಸಂದೇಹಗಳಿದ್ದಾಗ, ಪ್ರಶ್ನಾರ್ಥಕಚಿಹ್ನೆಗಳನ್ನು ಅಂಥ ಕಡೆ ಗಳಲ್ಲಿ ಹಾಕಲಾಗಿದೆ (ಉದಾ : ಕೃಪೇ ೨೭, ೬೯, ೮೩ ; ಪಾಂಪು ೯೯, ೨೧೫). ಹೀಗೆ ತೊಡಕಾಗಿರುವ ವೃತ್ತಜಾತಿಗಳನ್ನು ಕೆಲವೊಮ್ಮೆ ಗುರುತಿಸದೆಯೇ ಬಿಟ್ಟಿರಲೂಬಹುದು.

೭. ಶಾಸನಪಾಠದಲ್ಲಿಯೇ ಪದ್ಯಜಾತಿಯ ಸ್ಪಷ್ಟಸೂಚನೆಯಿರುವೆಡೆಗಳಲ್ಲಿ (ಉದಾ : ಕಂದ, ಕ, ಕಂ), ಮತ್ತೆ ಅಂಥವನ್ನು ಅಡಿಟಿಪ್ಪಣಿಯಲ್ಲಿ ತೋರಿಸಿಲ್ಲ.

ವರ್ಣವೃತ್ತಗಳಲ್ಲಿಯ ವಿಷಮಚತುಷ್ಪದಿಗಳಾದ ಉಪಜಾತಿಗಳಲ್ಲಿ ಭೇದಗಳನ್ನು ಸೂಚಿಸದೆ ಸಾಧಾರಣವಾಗಿ ಉಪಜಾತಿಯೆಂದೇ ಕರೆದಿದೆ. ಅರ್ಧಸಮಚತುಷ್ಪದಿಗಳ ವಿಚಾರದಲ್ಲಿ ಭೇದಗಳನ್ನು ಹೇಳಿ, ಮಗ್ಗುಲಲ್ಲಿ ದುಂಡುಕಂಸದೊಳಗೆ

ಅರ್ಧಸಮಚತುಷ್ಪದಿಯೆಂದು ಬರೆದಿದೆ. ಮಾತ್ರಾವೃತ್ತಗಳಲ್ಲಿ ಆರ್ಯೆ ಮತ್ತು ಆ ವರ್ಗದ ಕೆಲವು ಪ್ರಕಾರಗಳಾದ ಉದ್ಗೀತಿ, ಗೀತಿ, ಆರ್ಯಾಗೀತಿ, ಸಂಕೀರ್ಣಸ್ಕಂಧಕಗಳ ಬಳಕೆಯಿದ್ದು, ಅವನ್ನು ತಿಳಿಸಿದೆ. ಕನ್ನಡ ಮಾತ್ರಾಪದ್ಯಜಾತಿಗಳಲ್ಲಿ ಕಂದವುಂಟು. ಕರ್ಣಾಟಕವಿಷಯಜಾತಿಗಳಲ್ಲಿ ಯಾವೊಂದರ ಬಳಕೆಯೂ ಇಲ್ಲ.

ವರ್ಣಸಮಚತುಷ್ಪದೀವೃತ್ತಗಳ ಪ್ರಯೋಗ ಈ ತೆರನಾದುದು : ತ್ರಿಷ್ಟುಪ್ ವರ್ಗದ (೧೧) ಇಂದ್ರವಜ್ರ, ದೋಧಕ, ಶಾಲಿನಿ, ಸ್ವಾಗತ; ಜಗತೀವರ್ಗದ (೧೨) ದ್ರುತವಿಲಂಬಿತ, ಭುಜಂಗಪ್ರಯಾತ; ಶಕ್ವರೀವರ್ಗದ (೧೪) ವಸಂತತಿಲಕ; ಅತಿಶಕ್ವರೀವರ್ಗದ (೧೫) ಮಾಲಿನಿ ; ಅಷ್ಟಿವರ್ಗದ (೧೬) ಪಂಚಚಾಮರ ; ಅತ್ಯಷ್ಟಿವರ್ಗದ (೧೭) ಪೃಥ್ವಿ, ಮಂದಾಕ್ರಾಂತ, ಶಿಖರಿಣಿ, ಹರಿಣಿ ; ಧೃತಿವರ್ಗದ (೧೮) ಮಲ್ಲಿಕಾಮಾಲೆ ; ಅತಿಧೃತಿವರ್ಗದ (೧೯) ಶಾರ್ದೂಲವಿಕ್ರೀಡಿತ ; ಕೃತಿವರ್ಗದ (೨೦) ಉತ್ಪಲಮಾಲೆ, ಮತ್ತೇಭವಿಕ್ರೀಡಿತ ; ಪ್ರಕೃತಿವರ್ಗದ (೨೧) ಚಂಪಕಮಾಲೆ, ಸ್ರಗ್ಧರೆ; ಆಕೃತಿವರ್ಗದ (೨೨) ಮಹಾಸ್ರಗ್ಧರೆ.

ಮಾಲಾವೃತ್ತವರ್ಗದ ‘ ತಾಳಗ್ರಾಹಿವೃತ್ತ ’ವೆಂಬ ಒಂದು ಕನ್ನಡ ಪದ್ಯಜಾತಿ ಪಾಂಡವಪುರ ೯೯ರಲ್ಲಿ ಬಂದಿದೆ. ಛಂದೋಗ್ರಂಥಗಳಲ್ಲಿ ಈ ವೃತ್ತ ಲಯಗ್ರಾಹಿಯೆಂದು ಪ್ರಸಿದ್ಧವಾಗಿದೆ. ಈ ವೃತ್ತ, ಈಗ ಚಿಕ್ಕದೇವರಾಜರ ಹೆಸರಿನಲ್ಲಿರುವ, ಆದರೆ ಈ ಶಾಸನಕರ್ತೃ ತಿರುಮಲಾರ್ಯನೇ ರಚಿಸಿರಬಹುದಾದ, ‘ ಚಿಕದೇವರಾಜ ಬಿನ್ನಪ ’ದಲ್ಲಿಯೂ ಬಂದಿದೆ. (ಪ್ರಾಸಾಕ್ಷರದ ಆವೃತ್ತಿಯ ದೃಷ್ಟಿಯಿಂದ ಮಾತ್ರ ಇದು ಮಾಲಾವೃತ್ತದ ಲಲಿತವೃತ್ತದಿಂದ ಬೇರೆಯಾದುದು ; ಲಕ್ಷಣದ ಪರಿಶೀಲನೆಗೆ ನೋಡಿ : ‘ ಕವಿಜನಾಶ್ರಯಮು ’ವಿನ ಉದ್ಧರಮಾಲಾ ವೃತ್ತಾಧಿಕಾರಮು).

ಕೃಪೇ ೭೭ರಲ್ಲಿಯ ಚಂಪಕಮಾಲೆಯಂತೆ ತೋರುವ ಒಂದು ವೃತ್ತ ಕುತೂಹಲಕರ. ಕೃಪೇ ೩೯, ೯೯, ಪಾಂಪು ೯೯, ೨೧೪, ೨೧೫, ೨೧೬, ಶ್ರೀಪ ೨೪ ಇವುಗಳಲ್ಲಿಯ ವೃತ್ತವೈವಿಧ್ಯ ಗಮನ ಸೆಳೆಯುತ್ತದೆ.

ಅರ್ಧಸಮಚತುಷ್ಪದೀವೃತ್ತಗಳಲ್ಲಿ ಇಂದ್ರವಜ್ರ, ಉಪೇಂದ್ರವಜ್ರಗಳ ಮಿಶ್ರಣದ ಆಖ್ಯಾನಕಿಯೊಂದು ಮಾತ್ರ ಬಳಕೆಯಾಗಿದೆ. ಪಾಂಪು ೯೯ರ ಪದ್ಯವೇ ೨೧೬ರಲ್ಲಿ ಆವೃತ್ತಿಗೊಂಡಿದೆ. ವಿಷಮಚತುಷ್ಪದೀವೃತ್ತಗಳಲ್ಲಿ ಇಂದ್ರವಜ್ರ, ಉಪೇಂದ್ರವಜ್ರಗಳ ಮಿಶ್ರಣವೇ ಅಧಿಕ (ಉದಾ : ಕೃಪೇ ೯೯ ; ಪಾಂಪು ೯೯, ೨೧೪).

ಮಾತ್ರಾವೃತ್ತಗಳು ಪ್ರಯೋಗವಾಗಿರುವ ರೀತಿ : ಆರ್ಯೆ, ಅಸಮಗ್ರಪಾದಗಳ ಆರ್ಯೆ ಅಥವಾ ಗೀತಿ, ಆರ್ಯಾಗೀತಿ, ಗೀತಿ, ಉದ್ಗೀತಿ, ಸಂಕೀರ್ಣಕ ಅಥವಾ ಸಂಕೀರ್ಣಸ್ಕಂಧಕ. ಗೀತಿಯೂ ಆ ಬಳಿಕ ಆರ್ಯೆಯೂ ಉಳಿದವುಗಳಿಗಿಂತ ಅಧಿಕ ಸಂಖ್ಯೆಯಲ್ಲಿ ಪ್ರಯೋಗವಾಗಿವೆ. ಪುನರಾವೃತ್ತಿಗೊಂಡಾದರೂ ಸಾಕಷ್ಟು ಸಂಖ್ಯೆಯ ಸಂಕೀರ್ಣಸ್ಕಂಧಕಗಳು ದೊರೆಯುತ್ತಿರುವುದು ಒಂದು ವಿಶೇಷ. ಪಾಂಪು ೯೯ ಮತ್ತು ಅದೇ ತಾಲ್ಲೂಕಿನ ೨೧೫, ೨೧೬—ಇಲ್ಲಿ ಒಂದೇ ನಿದರ್ಶನ ಅಲ್ಪವ್ಯತ್ಯಾಸದಿಂದ ಬೇರೆಯೆನ್ನುವಂತೆ ತೋರುವುದು ಕುತೂಹಲಕರವಾಗಿದೆ.

ಕನ್ನಡ ಪದ್ಯಜಾತಿಗಳಲ್ಲಿ ಸಾಧಾರಣವಾಗಿ ಪ್ರಯೋಗಾಧಿಕ್ಯವನ್ನುಳ್ಳ ಕಂದ, ಕನ್ನಡ ಪದ್ಯಶಾಸನಗಳ ಸಂಖ್ಯೆ ಕಡಮೆಯಾಗಿರುವಂತೆ ತೋರುವುದರಿಂದ ಇಲ್ಲಿ ವಿಶೇಷವಾಗಿ ಕಂಡುಬರುವುದಿಲ್ಲ. ಅಶುದ್ಧವೆಂದು ಗುರುತಿಸಿದ ಕೆಲವು ನಿದರ್ಶನಗಳು (ಉದಾ : ಕೃಪೇ ೩, ೨೬, ೬೦, ೬೯, ೮೩) ರಚನೆಯ ದೃಷ್ಟಿಯಿಂದ ವಿಚಾರಾರ್ಹವಾಗಿವೆ ; ಕವಿಗಳು ಹೆಚ್ಚು ನಿಯಮನಿಷ್ಠೆಯನ್ನು ತೋರದೆ ರಚಿಸಿದ ಶಿಥಿಲಬಂಧಗಳೆಂದು ಹೇಳುವಂತಿವೆ.

ವಿವಿಧ ಛಂದಸ್ಸುಗಳ ಹಂಚಿಕೆಯ ದೃಷ್ಟಿಯಿಂದ ಒಟ್ಟು ಸಂಪುಟದಲ್ಲಿ ಶ್ಲೋಕಗಳ ಸಂಖ್ಯೆ ಹೆಚ್ಚೆಂದು ತೋರುತ್ತದೆ. ಕೆಲವು ಶಾಸನಗಳಲ್ಲಿ ಅದನ್ನೇ ಅಧಿಕ ಸಂಖ್ಯೆಯಲ್ಲಿ ಬಳಸಿದೆ (ಉದಾ : ಪಾಂಪು ೯೯ ; ಶ್ರೀಪ ೨೫). ಲಕ್ಷಣದ ದೃಷ್ಟಿಯಿಂದ ಪಾದದ ೫, ೬ ಮತ್ತು ೭ನೆಯ ಅಕ್ಷರಗಳ ಸ್ಥಾನಗಳಲ್ಲಿ ರೂಢವಾದ ಗುರುಲಘುನಿಯಮವನ್ನು ತಪ್ಪದೆ ಪಾಲಿಸಿರುವಂಥವನ್ನು ‘ ಶ್ಲೋಕ ’ ಎಂದೂ ಪಾಲಿಸದಿರುವಂಥವನ್ನು ‘ ಶ್ಲೋಕ ; ಅಪವಾದ ’ ಎಂದೂ ತೋರಿಸಿದೆ. ಹೀಗೆಯೇ ಪಾದಸಂಖ್ಯೆ ಕಡಮೆಯಾಗಿದ್ದಾಗ ‘ ಶ್ಲೋಕ ; ಅಸಮಗ್ರ ’ ಎಂದೂ ಅಕ್ಷರಸಂಖ್ಯೆಯಲ್ಲಿ ಹೆಚ್ಚು ಕಡಮೆಗಳೂ ಇತರ ಸ್ಖಾಲಿತ್ಯಗಳೂ ಇರುವಲ್ಲಿ ‘ ಶ್ಲೋಕ ; ಅಶುದ್ಧ ’ ಎಂದೂ ಕರೆದಿದೆ. ಭಾಷೆ, ಛಂದಸ್ಸುಗಳ ದೃಷ್ಟಿಯಿಂದ ಶ್ಲೋಕಗಳ ಪ್ರತ್ಯೇಕ ಪರಿಶೀಲನೆ ಫಲಕಾರಿಯಾದುದೆಂದು ತೋರುತ್ತದೆ.

ಅಸಮಗ್ರ ಪಾದಗಳ ಛಂದಸ್ಸುಗಳಿರುವ (ಉದಾ : ಪಾಂಪು ೨೧೪), ಅಪೂರ್ವವೂ ವಿವಿಧವೂ ಆದ ಛಂದಸ್ಸುಗಳಿರುವ (ಉದಾ : ಪಾಂಪು ೨೧೫), ಬೇರೆ ಬೇರೆ ಕಾರಣಗಳಿಗಾಗಿ ನಿಯಮಕ್ಕೆ ಒಗ್ಗದ ಛಂದಸ್ಸುಗಳಿರುವ (ಉದಾ : ಪಾಂಪು ೯೯) ಶಾಸನಗಳು ಛಂದಸ್ಸಿನ ದೃಷ್ಟಿಯಿಂದ ಕುತೂಹಲಕರವಾಗಿವೆ. ರಾಮಾಯಣಂ ತಿರುಮಲಾಚಾರ್ಯಕೃತ ಪಾಂಪು ೯೯ನೆಯ ಶಾಸನವನ್ನು ಇದೇ ಕವಿಯ ಮೈ ೯೯ರ ಶಾಸನದೊಂದಿಗೆ (ಎಕ., V) ಹೋಲಿಸಿ ನೋಡಬಹುದು. ಕನ್ನಡ ಕವಿತ್ವಕ್ಕೆ ತಕ್ಕ ಪ್ರಾತಿನಿಧ್ಯವೇ ದೊರೆತಿಲ್ಲವೆಂದು ಹೇಳುವಮಟ್ಟಿಗೆ ಕನ್ನಡ ಪದ್ಯಶಾಸನಗಳ ಕೊರತೆಯಿದೆ, ಈ ಸಂಪುಟದ ಶಾಸನಗಳಲ್ಲಿ.

# INTRODUCTION

This volume is the sixth in the series of Revised Volumes of *Epigraphia Carnatica* and the first containing inscriptions from the present Mandya District. Inscriptions from three taluks *viz.*, Kṛishṇarājapēṭe (Kr.), Pāṇḍavapura (PP.) and Śrīraṅgapaṭṭaṇa (Sr.), containing respectively 114, 263 and 122 records from each taluk are included herein. There are, in all, 499 inscriptions in this volume. Of these, 68 are new records. The present Pāṇḍavapura taluk, which was not a separate taluk formerly, was formed by grouping villages from Kṛishṇarājapēṭe and Śrīraṅga-paṭṭaṇa taluks. Therefore, the inscriptions originally found in the villages of Kṛishṇarājapēṭe and Śrīraṅgapaṭṭaṇa taluks which are now in the present Pāṇḍavapura taluk, are brought together under Pāṇḍavapura taluk.

Of the 499 inscriptions published in the present volume, 62 are Tamil records in Tamil and Grantha characters, while one is in Grantha script and Sanskrit language and two are in Nāgari script and Kannada language. Of the rest, 10 records are in Sanskrit, 12 in Telugu, 16 in Persian, 3 in English and 1 in Gujarathi. The remaining are in Kannada. A good number of these Kannada records have also portions of them in Sanskrit. It is well known that the invocatory verses and imprecatory portions of quite a large number of Kannada records are invariably in Sanskrit.

## GANGAS

There are only seven inscriptions belonging to this dynasty in the present volume. Sr. 66 is a copper-plate record engraved on five plates. This record, in Kannada script, is in Sanskrit and Kannada languages. The Gaṅga genealogy commencing from Koṅguṇivarma is given herein. The record which mentions Vishṇugōpa, son of Harivarma, refers to Śrīvikrama's son as Dugga. It is stated in the record that during the reign of Mārasiṅga Eṛeyappa, son of Śivamāra II, with his consent, Kali Noḷambādhirāja and his son, together, granted the village Tipperūr as *brahmadēya* to Ponnadi, the chief of the village Arpoḷi. The name of the son of Kali Noḷambādhirāja Kolliyarasa is not given. He is described as *nijarāma* and *nayadhīra*. The record is not dated. Mārasiṅga Eṛeyappa, son of Śivamāra II, did not rule. It is surmised that he died when he was yet a prince. On the basis of the Ālūr copper-plate record of 796 A.D.,[1] it is stated that by this time Mārasimha was administering the Gaṅga-maṇḍala under the Rāshṭrakūṭas.[2]

Kr. 19 is an undated inscription that records the death of Bomma in a battle at Kalaūr fought by Nītivākya-permānaḍi. It may be assigned to c. 9th century. It is not possible to identify Nītivākya-permānaḍi mentioned in this record. Kr. 20 also belongs to the same period. Eṛeyapparasa is mentioned herein. The record registers the grant of land as *bāḷgaḷchu*. Sr. 85 belongs to the 34th regnal year of Satyavākya-permānaḍi. He is identified with Rāchamalla II and the record is assigned to 904-05 A.D. There are variations in the readings of Rice and the one given by us. Though Rice has doubtfully ascribed this record to 904-05 A.D., in the translation portion, he has said nothing about it in the introduction. Rice has read the date as the 4th year in the text of the record. But we have read it as the 34th year. The record refers to certain remission of taxes to be paid in the first and second years, in lieu of, or for having constructed a tank. Kaḷbappu-giri (Śravaṇabeḷagoḷa) is described in the record as adorned with the footprints of Bhadrabāhu and Chandragupta.

1. *MAR.*, 1924, No. 80
2. N. Lakshminarayana Rao and R. S. Panchamukhi : *Karṇāṭakada Arasu-manetanagaḷu* (Kannada) p. 164

The distribution of inscriptions in the different Volumes previously published are noted below:

| Taluk | Vol. III (First edition) | Vol. IV (First edition) | Vol. XIV | MARs (from 1923 onwards) | New (Included in the present volume,) | Total | Remarks |
|---|---|---|---|---|---|---|---|
| *Krishnarajapete* | — | 80<br>—3 *Sannads*<br>—20(a) | 19<br>—14(a) | 15<br>—2 *Sannads*<br>—1 Revised | 40 | 114 | *Sannads*, copies of inscriptions and modern records of the previous volumes are omitted.<br>(a) 20 and 14 records of volumes IV and XIV respectively are transferred to the present Pāṇḍavapura taluk. |
| *Pandavapura*(a) | 94(a) | 20<br>+1(b) | 14<br>+2(b)<br>—1(c)<br>109<br>+1(b) | 3<br>+1 | 19 | 263 | (a) Formerly the present Pāṇḍavapura taluk was not a separate taluk. Inscriptions in villages originally included in Krishṇarājapēṭe and Śrīraṅgapaṭṭaṇa taluks, but now brought under Pāṇḍavapura taluk have been separated and included in this taluk in the present volume.<br>(b) Nos. 35 and 35a of volume IV are given two separate numbers (Nos. 35 and 36) in the present volume. Records Nos. 69, 69a and 70, 70a revised in volume XIV are given separate numbers *viz.*, 102, 103, 104 and 105 respectively. An inscription of volume XIV (No. 278) is split into two (No. 158 & 159).<br>(c) A record of volume IV (No. 22) had been given a separate number (No. 81) in volume XIV. Its number in the present volume is 261. |

given a separate number (No. 81) in volume

| | | | | | | | |
|---|---|---|---|---|---|---|---|
| *Srirangapattana* | 158<br>—2 *Sannads*<br>—94(a)<br>+2(b)<br>—3(c) | 2 | 156<br>—109(a) | 4<br>—1(a) | 9 | 122 | (a) 94, 109 and 1 records of volumes III, XIV and MARs respectively have been transferred to the present Pāṇḍavapura taluk.<br>(b) An inscription of volume III (No. 8) is split into two (Nos. 19 and 20). Nos. 27 and 27a of the same volume are given two separate numbers (Nos. 53 and 54).<br>(c) Four inscriptions of volume III (Nos. 18–21) are treated as a single record (No. 49). |
| | 155 | 80 | 177 | 19 | 68 | 499 | |

PP. 47 is dated 906-07 A.D., in the period of Satyavākya-permānaḍi. On this date, Rāchamalla II and his nephew Nītimārga Eṟegaṅga were ruling the kingdom jointly. The king mentioned in the record may be identified with Rāchamalla II on the basis of the title *Satyavākya*.

PP. 16 from Kyātanahaḷḷi registers the grant of rice and ghee by Satyavākya-permānaḍi and Eṟeyapparasa to the Kella-basadi built by (?) Chāgi-permānaḍi. Though the record is not dated, on palaeographical grounds, these two kings may be identified respectively with Rāchamalla II and (Nītimārga) Eṟegaṅga. The kings have been described as protectors of the *syādvāda* and the assembly of *śravaṇas* (*śravaṇa-saṃgha-syādvād-ādhārabhūta*). Komārasēna-bhaṭāra, the recipient of the gift, probably belonged to this Śravaṇa-saṅgha. This record also refers to Kaḷbappu-tīrtha which is stated to have been sanctified by the great *munis* Bhadrabāhu and Chandragupta.

## CHOLAS

Of the four inscriptions of the Chōḷas, two belong to the reign-period of Rājārāja I. Both are in Kannada. The first record (PP. 51) is dated 1011 A.D. The second (Sr. 78) belongs to the next year (1012-13 A.D.). We have already discussed about this latter record from Balamuri.[1] It states that Pañchavan-mahārāya, a bee at the lotus-feet of Rājarāja, was the *mahādaṇḍanāyaka* of both the Beṅgi and Gaṅga-maṇḍalas, during the reign of Rājarāja-chōḷa. Moreover, as it is indicated that he had proceeded upto the Beḷvala country in his expeditions, there is no doubt that this Pañchavan-mahārāya was prince Rājēndra I. It is known from other sources also that, by this time, Rājēndra had marched against Chālukya Vikramāditya V. Rājēndra is described in the present record as the rutting elephant of the Chōḷa, the rutting elephant of Mummaḍi-chōḷa *etc.* It is noteworthy that *Mummaḍi-chōḷa* was one of the titles of Rājarāja.

Sr. 67 of Kulōttuṅga is a Tamil record in Tamil and Grantha characters. It is dated the 33rd regnal year of the king. It records the renovation of a tank at the village Siṟiya Kalasattapāḍi *alias* Vānavan-mādēvi-chaturvēdimaṅgala by Pōman Irāman, a *maṇḍalika* of the king. It is known from this record that he had another name Virudarāya-bhayaṅkara-mārāyan. *Virudarāja(ya)bhayaṅkara* is one of the epithets borne by Kulōttuṅga I. The Chōḷa feudatories were generally using the royal titles along with their names. Presuming the king mentioned in the present record to be Kulōttuṅga I, the date of the record has deen fixed as 1102-03 A.D.

PP. 44 from Kannambāḍi is another record of the same king. This Kannada record refers to the grant of land by two *gāvuṇḍus* to two temples got built by Mādiyaṇṇa and Lakkaṇṇa who were the sons of Mutahaḍeyarāya, the *vaḍuga-vēḷekāṟa*. *Vēḷekāṟa* is equivalent to *vēḷevāḷi*. These were warriors who had pledged their lives for their lord. *Vaḍuga-vēḷekāṟa* may be interpreted as the *veḷekāṟa* of the northern territories of the kingdom.

## HOYSALAS

More than 90 inscriptions in the volume belong to the rulers of the Hoysaḷa dynasty.

Kr. 50 is from Toṇachi. This record is noticed with its facsimile in the Annual Report of the Archaeological Department.[2] Tribhuvanamalla Poysaḷadēva is the king mentioned. The date of the record is Śaka 954, Sarvajitu. These details do not correspond. In Śaka 954, the

1 *EC.*, V (Revised edition 1976) *Introduction, XC*

2 *MAR.*. 1915, p. 50.

cyclic year was Prajāpati. If the cyclic year Sarvajitu is to be taken as correct, then the Śaka year would be 970 (1048-49 A.D.). Hoysaḷa Vinayāditya was ruling in this year. Hence the king mentioned in the record is identified with Vinayāditya.

In Kr. 37 Hoysaḷadēva who was ruling Gaṅga-maṇḍala is found bearing the titles like *mahāmaṇḍalēśvara*, lord of the excellent city of Dvārāvati and a sun in the firmament the Yādava race. It is dated 1095-96 A.D. As Vinayāditya was still ruling at that time, Hoysaḷadēva is, in all likelihood, Vinayāditya.

PP. 241 is from Suṅkātoṇḍanūr. It is stated herein that *mahāmaṇḍalēśvara* Hoysaḷadēva was ruling the kingdom from Dōrasamudra. This worn out record, engraved on a hero-stone, refers to a *mahāpradhāna* whose name and other details are lost. Narasimhachar has assigned this record to Vishṇuvardhanadēva.[1] It is not known on what grounds this identification is made. One of the reasons to consider this Hoysaḷadēva to be Vishṇuvardhana seems to be that there is no reference to Dōrasamudra in the inscriptions of Vinayāditya. But, as already seen above, Vinayāditya himself had borne the titles lord of the excellent city of Dvārāvati, *etc*., by 1095-96 A.D. Moreover, in the Toṇachi record also he is referred to only as *mahāmaṇḍalēśvara* Tribhuvanamalla Poysaḷadēva. We have assigned that record to the reign of Vinayāditya. Since the king is referred to only as *mahāmaṇḍalēśvara* Poysaḷadēva in the Toṇachi record belonging to the beginning of his reign-period, this record from Suṅkātoṇḍanūr may also be attributed to Vinayāditya. But the question, whether Dōrasamudra had already, by then, become the Hoysaḷa capital, cannot be satisfactorily answered.

Among the seventeen inscriptions of Vishṇuvardhana in the present volume, Kr. 114 is the earliest. It is dated 1114-15 A.D. The king is referred to in this as *mahāmaṇḍalēśvara* Biṭṭi Hoysaḷadēva. In PP. 41 of 1118 A.D., Liṅgapayya figures as his *mahāpradhāna* and *daṇḍanāyaka*. On that date, Vishṇuvardhana was residing at Talakāḍu. It is known from Kr. 62 that *mahāsāmanta* Māchaya-nāyaka was administering Māḷigeyūr in 1140 A.D. However, in 1117 A.D., Balleya-nāyaka was administering probably the same Māḷigeyūr. He is stated to have been the *mayduna* of *piriyarasi*, *paṭṭamahādēvi* Śāntaladēvi. *Mayduna* generally means husband's younger brother. If this meaning is applied, Balleya-nāyaka would then become a brother of Vishṇuvardhana. But, Vishṇuvardhana had no brother of such name. The term has also another meaning *i.e*., sister's husband. If this term is thus interpreted, Balleya-nāyaka would be the husband of the younger sister of Śāntale. However, it is not known whether Śāntale had any sister.

An officer named Chiṇṇa is said to be administering a small division, Kikkēri-12, in Kr. 73, a record from Hirīkaḷale, so far unpublished. The lower portion of the stone bearing this record is damaged. No date is given in the record. This record is the same as the one noticed in the Annual Report of the Archaeological Department.[2] It is stated therein that Chiṇṇa was administering Maṅkike-12. But this is wrong. Kikkēri-12 is the correct reading in the text. On the southern face of the same stone there is another record (Kr. 74) of 1113 A.D. Since this record belongs to the reign-period of Vishṇuvardhana, it may be surmised that the former record also was issued at the same time. If so, this record would be the earliest record of Vishṇuvardhana in the present volume.

Kr. 107 records the construction of a *basadi* and registers the grant of the villages Māṇikadoḍalūr and Māvinakere for the same by *mahāpradhāna*, *daṇḍanāyaka* Puṇisamayya. The date and other details of the record are lost.

1 *MAR*., 1912, p. 41
2 *MAR*., 1915, p. 50

PP. 73 is engraved on a pillar in the *navaraṅga-maṇṭapa* of the shrine of the goddess in the Lakshmīnārāyaṇa temple at Toṇṇūr. It refers to Vishṇuvardhana-pratāpa-Hoysaḷadēva and states that *mahāpradhāna, tantrādhishṭāyaka, mahāpasāyita, heggaḍe* Surigeya Nāgayya got constructed the *ōlagasāle* (*navaraṅga-maṇṭapa*). No date is given. PP. 79, from the same village, dated 1175 A.D., in the reign-period of Ballāḷa II, refers to the remission of *pannāya* by *nāyaka-heggaḍe* Māraṇṇa at the instance of probably the same Surigeya Nāgayya. Yet another, but undated, record states that the illustrious *mahāpradhāna, śrīkaraṇada heggaḍe* Nāgaṇṇa got constructed the *maṇṭapa.* This Nāgaṇṇa may be Surigeya Nāgayya himself. The first record belongs to the reign-period of Vishṇuvardhana. The second is of Ballāḷa II. If Nāgayya mentioned in both these records is identical, it may be surmised that he probably assumed office during the last years of Vishṇuvardhana's rule and continued in office even during the reign-period of Ballāḷa II.

PP. 229 from Hosakōṭe is a worn out record registering a grant to Sivayōgi Dharmapuri-bhaṭṭa by Vishṇuvardhana Poysaḷadēva, his mother Tuḷuvaladēvi and his elder brother Nṛipa-bhūpa (*Vishṇuvardhana Poysaḷadēvaru tammavve Tuḷuvaladēviyaru tammātmāgrajanappa Nṛipabhū-panuvirddu*). PP 11 from Śambhunahaḷḷi also belongs to the reign-period of Vishṇuvardhana Hoysaḷadēva. Though there is a reference to the grant of a village to god Tuvvalēśvara got consecrated by his mother (*tammavve*) Mādala-mahādēvi in that record, it is not clear as to whom the term *tammavve* applies. The record is slightly worn out in the middle. Yādavapura is mentioned therein. However, in the Hosakōṭe record Tuḷuvaladēvi is described as the mother of Vishṇuvardhana. As is well known Vishṇuvardhana and his brothers were the sons of Ēchala-dēvi Then, what was the relation between Tuḷuvaladēvi and Vishṇuvardhana? Could it be that she was another wife of Eṟeyaṅga?

Kr. 56 registers a grant of land to god Kaṟidēva of Toḷañche by Vishṇuvardhanadēva, the conqueror of Naṅgali (*Naṃgaliya gelada*). Unfortunately, the date and other details are lost. It may be surmised that the king made this grant on the eve of conquering Naṅgali. But the year of conquest is not known.

The Nāgaraghaṭṭa record (Kr. 60) states that Vishṇuvardhana was residing at Baṅkāpura. This record is also undated. However, it is known that Vishṇuvardhana conquered Baṅkāpura in c 1136 A.D. Even thereafter, he used to reside at Baṅkāpura now and then. The record also refers to his capturing Virāṭapura (Hānagal). Since this conquest took place in c. 1141 A.D., the record might have come into existence after 1141 A.D.

Kr. 21 refers to a grant made to Vīrakoṅgāḷva-jinālaya by Chandaladēvi, elder queen (*piriyarasi*) of Vishṇuvardhana along with her younger brother Duddamalladēva. The gift village Kāvanahaḷḷi was situated within the Mandageṟe-śriti, an administrative unit. It is stated that the queen had received Mandageṟe as a dowry (*baḷuvaḷi*) from her father Prithviya-koṅgāḷva-dēva. Prabhāchandra-siddhāntadēva, the recipient of the gift, was the disciple of Mēghachandra-traividyadēva belonging to Mūla-saṅgha, Dēsiga-gaṇa and Pustaka- gachchha. This record was originally published in the Annual Report of the Archaeological Department for the year 1927. In the transliterated portion of the text therein the name of the queen has been read as Chantala-dēvi. It is suggested that Chantaladēvi is wrongly engraved for Śāntaladēvi. However, in the Kannada text given, it has been read as Chaṃdaladēvi. In fact Chandaladēvi was the daughter of Prithvi-koṅgāḷva as stated in the record. It may be surmised that he is Rājēndra-pṛithvi-koṅgāḷva, son of Rājādhirāja II. Duddamalla who is also known by the name Vīra[chōḷa]koṅgāḷva

in inscriptions, was his son.[1] His sister was Chandaladēvi, queen of Vishṇuvardhana. It is to be noted that Prabhāchandra-siddhāntadēva, the preceptor of this queen, was also the preceptor of Śāntaladēvi. Probably this is the reason for Dr. Shamasastri to identify Chandaladēvi with Śāntaladēvi.

Sr. 70 is engraved on the basement stone of the Janārdana temple at Beḷagoḷa. Dr. M. H. Krishna has discussed in detail the importance of this record published in the Annual Report for the year 1944. He has equated the cyclic year and other details of date given therein with 1098 A.D., November 22. The record does not mention the Śaka year. We could not get the original record. However, the text given by us is based on the facsimile published in the Annual Report. We find variations in readings of the texts published by us and the one given by Dr. Krishna. Dr. Krishna says[2] that the record registers a grant of land by the *mahājanas* including Laviyaṇṇa, Tirunārāyaṇap-perumāḷ, Chiruḷaviyaṇṇa and Pommiyaṇṇa, of Koṅgukoṇḍa-śri-Vishṇuvardhana-Pōsaḷadēva-chaturvēdimaṅgala to gods Rāma and Lakshmaṇa got consecrated by Udubhava-Sarvvajñadēvap-perumāḷ at the Sarvanamasyad-agrahāra known as southern Vāraṇāsi. According to the text given in the present volume, the *aśēsha-mahājanas*, including Vaḷai-aṇṇan, Tirunārāyaṇap-perumāḷ, Siruvaḷai-aṇṇan and Pommiyaṇṇa, of Vaḷaikuḷam *alias* Koṅgukoṇḍa-Vishṇuvardhana-Pōsaḷadēva-chaturvēdimaṅgala, made a grant of land known as *ariyamareḍḍikaḷani* as *sarvamānya* to gods Rāma and Lakshmaṇa described as Udbhava-sarvvajñadēvap-perumāḷ, got consecrated by Iṟai-appan at Sarvanamasyadagrahāra, southern Vāraṇāsi.

Since the details of date of the record have been equated with 1098 A.D., November 22, Dr. Krishna feels that the record throws light on the traditional stories relating to Rāmānujāchārya and Hoysaḷa Vishṇuvardhana. It is believed, according to tradition, that Vishṇuvardhana met Rāmānujāchārya in 1116 A.D. and embraced Śrīvaishṇavism. Thereafter, Vishṇuvardhana increased his activities and conquered Talakāḍu, Koṅgu and other places. But, a record of 1102 A.D., found at Bastihaḷḷi near Haḷēbīḍ and the present Beḷagoḷa record deny these inferences. The record under review shows that Vishṇuvardhana had captured the Koṅgu country and had the name Vishṇuvardhana as early as 1098 A.D. and that he had established an *agrahāra* in his name probably near Beḷagoḷa. Hence, Rāmānuja might have met Vishṇuvardhana prior to the date of this recod. Tirunārāyaṇa was the god consecrated by Rāmānuja at Mēlukōṭe. According to the Vaishṇava *Guruparamparas* this event occurred on December 16, 1098 A.D. But the present record was issued even a month earlier. It has to be surmised that Tirunārāyaṇa was used as a personal name even at that time, that the god Tirunārāyaṇa of Mēlukōṭe was well-known enough even earlier and that Rāmānuja worshipped the god already consecrated at that time and got renovated the temple which was in a dilapidated condition and made it popular. Thus explains Dr. Krishna.

On the other hand, it is clearly stated in the inscription itself that Vaḷaikuḷam (Beḷagoḷa) had also the name Koṅgukoṇḍa-Vishṇuvardhana-Pōśaḷadēva-chaturvēdimaṅgala. It is Iṟai-appan who got consecrated Rāma and Lakshmaṇa. Vaḷai-aṇṇan and others were the *mahājanas* of that *agrahāra*. The surmises made by Krishna are all a corollary to the equation of the date details of the record with 1098 A.D. However, on palaeographical grounds we can definitely say that it is a record of the 13-14th century and not of the 11th century. The year and other details of given date correspond to 9th November, 1338 A.D. The constellation was Chittā on that day and not Viśākha which fell on the next day. Hence, all the above arguments become irrelevant. It is not possible to say when Beḷagoḷa got the name Koṅgukoṇḍa-Vishṇuvardhana-

1 *Mānavika Karṇāṭaka*, II, pt. II, pp. 7–15.

2 *MAR.*, 1944, No. 11, pp. 54 ff

